Jun 93

# ಮಾನಸಿ

ತಿಂಗಳ ಪತ್ರಿಕೆ ಜೂನ್ 1993

★ ಪರಿಸರ–ಪರಿಸರವಿನಾಶ–ಮಹಿಳೆ

★ ಮನೆ ಮದ್ದು–ಮನೆ ಮಡದಿಗೊಂದು ಪುನರ್ ಮನ್ನಣೆ

★ ಭೀತಿಯಿಂದ ಬಿಡುಗಡೆ

★ ಸಾಂಪ್ರದಾಯಿಕ ಆಹಾರ ಸಂರಕ್ಷಣೆ ಮತ್ತು ಮಹಿಳೆ

★ ಗಸ್ತು ಹೊಡೆಯುತ್ತಿದೆ ಸಾವು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೭ ಸಂಚಿಕೆ : ೫

ಮೇ - ೧೯೯೩


**ಸಂಪಾದಕೀಯ ಮಂಡಳಿ :**

ರಾಜೇಶ್ವರಿ ಎಚ್. ಎಸ್.,
ಚಂಪಾವತಿ ಎಚ್. ಎಸ್., ಸರಸ್ವತಿ ದು.,
ಸವಿತ ಎ., ಗಾಯತ್ರಿ ವಿ.

**ಸಲಹೆ-ಸಹಕಾರ**

ಇಳಾ ವಿಜಯಾ

ವಿಳಾಸ :

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**
ನಂ–457, 12ನೇ ಅಡ್ಡರಸ್ತೆ
ಪಶ್ಚಿಮ ಕಾರ್ಡ್‌ರಸ್ತೆ 2ನೆ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086

ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.

ಬ್ಯಾಂಕ್ ಡ್ರಾಫ್ಟ್, ಎಂ.ಓ. ಗಳನ್ನು ಸಂಪರ್ಕ
ವಿಳಾಸಕ್ಕೆ ಕಳಿಸಿಕೊಡಬೇಕಾಗಿ ಕೋರಿದೆ.

**ಈ ಸಂಚಿಕೆಯಲ್ಲಿ...**




ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂಗು-೫೬೦೦೬೭



# ಸಂಪಾದಕೀಯ

ಮಹಿಳೆ ಎಂದರೆ ಜೀವ ನೀಡುವವಳು–ಉಳಿಸುವವಳು–ಅಪಾರ ತಾಳ್ಮೆ, ಸಹಿಷ್ಣುತೆ ಹೊಂದಿರುವವಳು, ಒಟ್ಟಾರೆಯಲ್ಲಿ ಪ್ರಕೃತಿಯಂತವಳು, ಇಂತಹ ಕಲ್ಪನೆ ಎಲ್ಲ ಸಮಯದಲ್ಲೂ ಹೇಗೋ ಒಂದು ರೀತಿಯಲ್ಲಿ ಪ್ರಕಟಗೊಳ್ಳುತ್ತಲೇ ಬಂದಿದೆ. ಒಟ್ಟಿನಲ್ಲಿ "ಮನೆಗಳನ್ನು ಕಟ್ಟುವವಳು" ಎಂಬಂತಿದ್ದ ಈ ಕಲ್ಪನೆಯನ್ನು ಗಾಂಧೀಜಿಯಂತವರು ಇನ್ನೂ ಮುಂದುವರೆದು ದೇಶ ಕಟ್ಟುವ ಶಕ್ತಿಯನ್ನಾಗಿ ಕೂಡ ಪ್ರಕಟಪಡಿಸಲು ಹಿಂಜರಿಯಲಿಲ್ಲ. ಆದರೆ ಯಾವಾಗಲೂ ಪುರುಷ ಕೈಗಳಲ್ಲೇ ಸಿಕ್ಕಿಹಾಕಿಕೊಂಡು ತಿರುಚಲ್ಪಟ್ಟ ಈ ಕಲ್ಪನೆಗಳ ಬಗ್ಗೆ ಸ್ತ್ರೀವಾದಿಗಳಲ್ಲಿ ಅಪಾರ ಸಿಟ್ಟಿದೆ. ಅದೇ ಸಮಯದಲ್ಲಿ ಇಂತಹ ಮೌಲಿಕ ಅಂಶಗಳನ್ನು ಬಿಟ್ಟುಕೊಡಲೂ ಸ್ತ್ರೀವಾದಿಗಳು ಸಿದ್ಧರಿಲ್ಲ. ಇಕೋ ಸ್ತ್ರೀವಾದಿಗಳು ಇದನ್ನು ಆಳ ಚಿಂತನೆಗೆ ಒಳಪಡಿಸಿ ಸ್ತ್ರೀ ದೃಷ್ಟಿಕೋನದಿಂದ ಇದಕ್ಕೊಂದು ಘನತೆಯನ್ನು, ಮನ್ನಣೆಯನ್ನು ತಂದುಕೊಡಲು ಪ್ರಯತ್ನಿಸಿದ್ದಾರೆ. ಆಧುನಿಕ ಅಭಿವೃದ್ಧಿಯ ಹಿಂಸಾತ್ಮಕ ರಾಜಕೀಯ ರೀತಿ ನೀತಿಗಳ ಕಂಬಂಧ ಬಾಹುಗಳಲ್ಲಿ ನಲಗುತ್ತಿರುವ ಸಮಾಜಗಳನ್ನು ಕಾಪಾಡಲು ಇರುವ ಒಂದೇ ಭರವಸೆ ಇದು ಎಂಬುದನ್ನು ಅನೇಕ ಸ್ತ್ರೀವಾದಿಗಳು ಸಮರ್ಥವಾಗಿ ವಾದಿಸಿದ್ದಾರೆ, ಪ್ರತಿರೋಧಗಳ ನಡುವೆಯೂ-

ಅದೇನೇಯಿದ್ದರೂ, ಇಂತಹ ಚರ್ಚೆಗಳು ಹೆಚ್ಚು ಆಧ್ಯಾತ್ಮಿಕ ಸ್ವರೂಪಗಳದ್ದಾಗಿ ಅಸ್ಪುಟವಾಗಿಯೇ ಉಳಿಯುವುದರಿಂದ ಹೆಚ್ಚು, ಹೆಚ್ಚು ನಿರ್ದಿಷ್ಟತೆಯೆಡೆಗೆ ನಡೆಯುವುದು ಮುಖ್ಯವಾಗುತ್ತದೆ. ಇಂತಹವನ್ನು ಹೆಚ್ಚು ಸ್ಪಷ್ಟತೆಯೆಡೆಗೆ ಒಯ್ಯುವ ಪ್ರಯತ್ನದ ಸಣ್ಣ ಪ್ರಾರಂಭವನ್ನು ಈ ಸಂಚಿಕೆಯಲ್ಲಿ ಮಾಡಲಾಗಿದೆ. ಮಹಿಳೆ-ಪ್ರಕೃತಿಯ ಸಂಬಂಧ, ಪರಿಸರ ವಿನಾಶದಿಂದ ಮಹಿಳೆಯ ಮೇಲೆ ಉಂಟಾಗುತ್ತಿರುವ ಪರಿಣಾಮಗಳನ್ನು ಶೈಲಜಾರ ಬರಹ ನೇರವಾಗಿ ಹೇಳುತ್ತದೆ. ಗಿಡಮೂಲಿಕೆ ಔಷಧಿಗಳು, ಆಹಾರ ಸಂರಕ್ಷಣೆ ಸಂಬಂಧದ ಬರಹಗಳು ಮಹಿಳೆ- sustainability ಸಂಬಂಧಕ್ಕೆ ದೃಷ್ಟಿಕೋನವೊಂದನ್ನು ಕಟ್ಟಿ ಕೊಡುತ್ತವೆ. ಸೂಕಿಯ ಬರಹ ಆಧ್ಯಾತ್ಮಿಕ ಹಂತಗಳಲ್ಲಿ ಕೆಲಸ ಮಾಡುತ್ತಲೇ ಮೂರ್ತತೆಯತ್ತ ಒಯ್ಯುತ್ತದೆ, ಅನುಭವ ತಳಹದಿಯಾಗಿರುವುದರಿಂದ. ಇವೆಲ್ಲವೂ ಇಕೋ ಸ್ತ್ರೀವಾದವನ್ನು ಅರ್ಥೈಸಿಕೊಳ್ಳಲು ಚಿಂತನೆಗೆ ಹಚ್ಚಬಹುದೇನೋ ಎಂಬ ನಂಬಿಕೆಯಷ್ಟೇ ನಮ್ಮದು.

## ಪರಿಸರ–ಪರಿಸರ ವಿನಾಶ–ಮಹಿಳೆ

**ಡಾ॥ ಆರ್. ಶೈಲಜ**

ಪರಿಸರ ವಿನಾಶ, ಅದರ ಪರಿಣಾಮಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಮೊದಲಿಗೆ ಪರಿಸರ ಎಂದರೆ ಏನು ? ಅದರ ಘಟಕಗಳಾವುವು ? ಅವುಗಳ ಮಹತ್ವ ವೇನು ? ಅವುಗಳ ನಡುವಿನ ಪರಸ್ಪರ ಸಂಬಂಧ ವೆಂತದ್ದು ಎಂಬುದನ್ನು ಅರ್ಥಮಾಡಿಕೊಂಡು ಮುಂದು ವರೆಯಬೇಕಾಗುತ್ತದೆ.

ನೀರು, ಮಣ್ಣು ಮತ್ತು ಗಾಳಿ ಇವು ಮೂರನ್ನು ಪರಿಸರದ ಮೂಲಭೂತ ಘಟಕಗಳೆನ್ನಬಹುದು.

**ನೀರು :** ನೀರು ಅತಿ ಹೆಚ್ಚು ಲವಣಗಳನ್ನು ಕರಗಿಸಿ ಕೊಳ್ಳುವ ಶಕ್ತಿ ಇರುವ ದ್ರಾವಣ. 'ಇದನ್ನು ಸಾರ್ವತ್ರಿಕ ದ್ರಾವಕ'ವೆನ್ನುತ್ತಾರೆ. ಸಸ್ಯಗಳ ಆಹಾರ ತಯಾರಿಕೆಯಲ್ಲಿ ನೀರಿನದು ಮುಖ್ಯ ಪಾತ್ರ. ಅಲ್ಲದೆ ಭೂಮಿಯಿಂದ ಗಿಡ ಮರಗಳ ಭಾಗಗಳಿಗೆ ಹರಿದುಹೋಗಬೇಕಾದರೆ ಇದು ಮಣ್ಣಿನಲ್ಲಿ ಇರುವ ಲವಣಗಳನ್ನೆಲ್ಲಾ ಕರಗಿಸಿಕೊಂಡು ಹೋಗುತ್ತದೆ. ಹೀಗೆಯೇ ಪೋಷಕಾಂಶಗಳ ಸಂವಹನೆ ಎಲ್ಲಾ ಭಾಗಗಳಿಗೆ ಆಗುವುದು ನೀರಿನಿಂದಲೇ. ನಮ್ಮ ಶರೀರದಲ್ಲೂ ಹೀಗೆಯೇ ನಡೆಯುತ್ತದೆ. ಇದರ ಜತೆಗೆ ಶರೀರಕ್ಕೆ ಆಕಾರವನ್ನು ಕೊಡುವುದು, ಉಷ್ಣತೆಯನ್ನು ಕಾಪಾಡುವುದೂ ನೀರಿನ ಕೆಲಸವೇ. ಇಷ್ಟಲ್ಲದೆ ದೇಹದಲ್ಲಿ ನಡೆಯುವ ರಾಸಾಯನಿಕ ಕ್ರಿಯೆಗಳ ಮಾಧ್ಯಮ ನೀರು.

**ಮಣ್ಣು :** ಮಣ್ಣು ಸಜೀವಿ ಮತ್ತು ನಿರ್ಜೀವಿ ಎರಡೂ ಹೌದು. ಮಣ್ಣು ಮೂರು ರೀತಿಯಲ್ಲಿ ತಯಾರಾಗುತ್ತದೆ. ಒಂದನೆಯದಾಗಿ, ಬಂಡೆಗಳು ಬಿಸಿಲಿನ ತಾಪಕ್ಕೆ ಉಬ್ಬುತ್ತವೆ. ತಂಪಾದಾಗ ಸಂಕುಚಿತ ಗೊಳ್ಳುತ್ತವೆ. ಹೀಗಾಗುವುದರಿಂದ ಬಿರುಕು ಬಿಡುತ್ತವೆ, ರಭಸದಿಂದ ಮಳೆ ಬಿದ್ದಾಗ ಬಿರುಕುಗಳು ಹೆಚ್ಚಾಗಿ ಚೂರುಗಳಾಗಿ ಒಡೆದು ಭೂಮಿ ಸೇರುತ್ತವೆ. ಇದು ಭೌತಿಕ ಕ್ರಿಯೆ. ಎರಡನೆಯದಾಗಿ, ಗಾಳಿಯಲ್ಲಿ ಗಂಧಕದ-ಡೈ-ಆಕ್ಸೈಡ್ ಇರುತ್ತದೆ. ಮಳೆ ನೀರಿನಲ್ಲಿ ಕರಗಿದಾಗ ಇದು ಆಮ್ಲವಾಗುತ್ತದೆ. ಈ ಆಮ್ಲ ಮಳೆಯ ಜತೆ ಬಂಡೆಯ ಮೇಲೆ ಬಿದ್ದಾಗ ಆದರಲ್ಲಿರುವ ಖನಿಜಗಳ ಜತೆ ಪ್ರಕ್ರಿಯೆಗೊಂಡು ಪುಡಿ-ಪುಡಿಯಾಗುತ್ತದೆ. ಇದು ರಾಸಾಯನಿಕ ಕ್ರಿಯೆ. ಮೂರನೆಯದಾಗಿ, ಜೈವಿಕ ಕ್ರಿಯೆ. ಬಂಡೆ ಪುಡಿಯಾಗಿದ್ದಾಗ ಅದರ ಮೇಲೆ ಬೀಜ ಬಿದ್ದರೆ ಸಸ್ಯಗಳು ಬೆಳೆಯುತ್ತವೆ. ಪ್ರಾಣಿಗಳು ಬರುತ್ತವೆ. ಅವು ಸತ್ತಾಗ ಕೊಳೆತು humous ಆಗುತ್ತದೆ. ಕೊಳೆ ಯುತ್ತಾ ಮಣ್ಣು ಆಗುತ್ತದೆ. ಹೀಗೆ ಉಂಟಾಗುವ ಮಣ್ಣು ಭೂಮಿಯಲ್ಲಿ ಒಂದು ಸೆಂ. ಮೀ. ತಯಾರಾಗ ಲಿಕ್ಕೆ 500 ವರ್ಷಗಳು, ಒಂದು ಇಂಚು ತಯಾರಾಗಲು 2500ರಿಂದ 3000 ವರ್ಷಗಳು ಬೇಕಾಗುತ್ತದೆ.

**ಗಾಳಿ :** ಇದೊಂದು ಮಿಶ್ರಣ. ಸಾರಜನಕವೇ ಹೆಚ್ಚು ಭಾಗ ಇರುವ ಇದರಲ್ಲಿ ಆಮ್ಲಜನಕ, ಇಂಗಾಲದ-ಡೈ-ಆಕ್ಸೈಡ್‌ಗಳಲ್ಲದೆ ಅತಿ ಸಣ್ಣ ಪ್ರಮಾಣದಲ್ಲಿ Inert-gasesಗಳು ಇರುತ್ತವೆ. ಸಸ್ಯಗಳ ಬೆಳವಣಿಗೆ, ಜೈವಿಕ ಕ್ರಿಯೆಗಳಿಗೆ ಗಾಳಿ ತುಂಬಾ ಮುಖ್ಯ.

ಪರಿಸರದಲ್ಲಿ ಅತಿ ಸಣ್ಣ ಜೀವಿಗಳಿಂದ ಹಿಡಿದು ಬೃಹದಾಕಾರದ ಜೀವಿಗಳವರೆಗೂ ವೈವಿಧ್ಯತೆಯನ್ನು ಹೊಂದಿದೆ. ಮರಳುಗಾಡು, ಸಮುದ್ರತಳ, ಮಂಜು ಬೆಟ್ಟಗಳಲ್ಲೂ ಜೀವಿಗಳಿವೆ. ಇದನ್ನೇ ನಾವು ಜೀವ ವೈವಿಧ್ಯತೆ ಎನ್ನುವುದು.

ಪರಿಸರ ಸಮತೋಲನ ಕಾಪಾಡಿಕೊಳ್ಳುವಲ್ಲಿ ಮರ ಗಳು ಮುಖ್ಯ ಪಾತ್ರ ವಹಿಸುತ್ತವೆ. ಮಳೆಯ ರಭಸ ತಡೆದು ಮಣ್ಣಿನ ಸವೆತವನ್ನು ತಡೆಯುತ್ತವೆ. ಎಲೆಗಳ ಕೊಳೆಯುವಿಕೆಯಿಂದ ಉಂಟಾಗುವ ಸ್ಪಂಜಿನಂತಹ ಗೊಬ್ಬರ ನೀರನ್ನು ಹಿಡಿದಿಟ್ಟುಕೊಂಡು ಭೂಮಿ ಹೆಚ್ಚು ನೀರು ಕುಡಿಯಲು ಸಹಾಯ ಮಾಡುತ್ತದೆ. ಮರಗಳ ಆಳ ಬೇರಿನ ಹರಡುವಿಕೆ ಮಣ್ಣನ್ನು ಹಿಡಿದಿಟ್ಟುಕೊಳ್ಳು ತ್ತದೆ. ದಟ್ಟ ಅರಣ್ಯಗಳಿದ್ದ ಕಡೆ ಸುತ್ತಲ ವಾತಾವರಣ ತಂಪಾಗಿರುವುದರಿಂದ ಮೋಡಗಳು ತಂಪುಗೊಂಡು ಮಳೆ ಸುರಿಸುತ್ತದೆ. ಗಾಳಿಯ ರಭಸವನ್ನು ತಡೆಯುವ ಇವು ಪ್ರಾಣಿ, ಪಕ್ಷಿಗಳಿಗೆ ಆಶ್ರಯ ಕೊಡುತ್ತವೆ. ಪ್ರಾಣಿ ಪಕ್ಷಿಗಳು ಬೀಜ ಪ್ರಸರಣ, ಪರಾಗಸ್ಪರ್ಶಗಳಿಗೆ ಸಹಾಯ ಮಾಡುತ್ತವಲ್ಲದೆ ಸ್ವಚ್ಛತೆಯನ್ನು ಕಾಪಾಡುತ್ತವೆ.

ಪರಿಸರದಲ್ಲಿ ಒಂದು ಆಹಾರ ಸರಪಳಿ ಇರುತ್ತದೆ.

ಒಂದು ಒಂದನ್ನು ತಿಂದು ಬದುಕುವ ಮೂಲಕ ಸಮತೋಲನ ಕಾಪಾಡಿಕೊಳ್ಳುತ್ತಿರುತ್ತವೆ. ಇಂದು ಈ ಸಂಬಂಧಗಳು ಮಾನವ ಮಧ್ಯಪ್ರವೇಶಿಕೆಯಿಂದ ತಪ್ಪಿ ಹೋಗುತ್ತಿರುವುದರಿಂದಲೇ ಎಲ್ಲಾ ಹಾನಿ ಉಂಟಾಗುತ್ತಿರುವುದು. ನೀರು, ಮಣ್ಣು, ಸಸ್ಯ, ಪ್ರಾಣಿ, ಮಾನವ, ಈ ಸಂಬಂಧ ತಿಳಿದುಕೊಂಡಾಗ ಮಾತ್ರ ಪರಿಸರ ನಾಶ, ಅಸಮತೋಲನಗಳನ್ನು ಗ್ರಹಿಸುವುದು ಸಾಧ್ಯ.

**ಅರಣ್ಯ ನಾಶಕ್ಕೆ ಮುಖ್ಯ ಕಾರಣಗಳು :**

1) ವ್ಯವಸಾಯ 2) ಕೈಗಾರಿಕೆ 3) ಪಟ್ಟಣದಲ್ಲಿನ ಕಟ್ಟಡಗಳು 4) ಅಣೆಕಟ್ಟುಗಳು 5) ಗಣಿ ಉದ್ಯಮ 6) ಹಲಗೆಗಳು, ಪೆಟ್ಟಿಗೆಗಳು 7) ಪಟ್ಟಣದವರಿಗೆ ಸೌದೆ 8) ರಸ್ತೆ, ವಿದ್ಯುತ್ ಕಂಬಗಳಿಗಾಗಿ.

ಹಳ್ಳಿಗಳವರು ಸೌದೆ ಇತ್ಯಾದಿಗಳಿಗಾಗಿ ಅರಣ್ಯ ನಾಶ ಮಾಡುತ್ತಾರೆ ಎಂಬುದು ಶುದ್ಧ ಸುಳ್ಳು. ಹಳ್ಳಿಗರು ಯಾವತ್ತೂ ಪುರಲುಗಳನ್ನು ಆರಿಸಿಕೊಳ್ಳುತ್ತಾರೆಯೇ ವಿನಃ ಮರಕಡಿಯುವುದಿಲ್ಲ.

**ಪರಿಣಾಮಗಳು :** ಮೂಲ ಉದ್ಯೋಗ ನಾಶವಾಗುತ್ತದೆ. ಸೌದೆಯ ಕೊರತೆ ಉಂಟಾಗುತ್ತದೆ. ಮೇವು ಸಿಗಲ್ಲ. ಅರಣ್ಯ ಉತ್ಪನ್ನಗಳ ಕೊರತೆ. ಪರಿಸರದಲ್ಲಿ ಮಣ್ಣಿನ ಸವೆತವಾಗುತ್ತದೆ. ಪ್ರವಾಹಗಳು ಉಂಟಾಗುತ್ತದೆ. ಅಂತರ್ಜಲ ತಗ್ಗುತ್ತದೆ. ಮಣ್ಣು ಸವಕಳಿ ಉಂಟಾಗುತ್ತದೆ. ಕೆರೆಗಳು, ನದಿಗಳು ಹೂಳು ತುಂಬಿಕೊಳ್ಳುತ್ತವೆ. ಪ್ರಾಣಿಗಳ, ಸಸ್ಯಗಳ ವೈವಿಧ್ಯತೆಗೆ ಧಕ್ಕೆಯುಂಟಾಗುತ್ತದೆ.

**ಮಹಿಳೆ-ಪರಿಸರ-ಪರಿಸರ ನಾಶ ಸಂಬಂಧ**

ಗ್ರಾಮೀಣ ಪರಿಸರದಲ್ಲಿ ಮಹಿಳೆ ಎಲ್ಲೆಲ್ಲಿ ಕೆಲಸ ಮಾಡುತ್ತಾಳೆ :

1) ಮನೆಯಲ್ಲಿ 2) ಹೊಲಗಳಲ್ಲಿ 3) ಉಪಉದ್ಯೋಗಗಳು-ಜಾನುವಾರು ನೋಡಿಕೊಳ್ಳುವುದು ಇತ್ಯಾದಿ. ಮನೆಯಲ್ಲಿ 9 ಗಂಟೆಗಳ ಕಾಲ ಮಹಿಳೆ ಕೆಲಸ ಮಾಡಿದರೆ ಪುರುಷರು 1 ಗಂಟೆ ಮಾತ್ರ ಕೆಲಸ ಮಾಡುತ್ತಾರೆ. ಈ ಗಂಟೆಯಲ್ಲಿ 4ರಿಂದ 4½ ಗಂಟೆಗಳು ಅಡಿಗೆ ಕೆಲಸ. ಹೊಲ-ಗದ್ದೆಗಳಿಗೆ ಊಟ ಒಯ್ಯುವುದು, ನೀರು ಸಂಗ್ರಹಣೆ, ಸೌದೆ ಸಂಗ್ರಹ, ಸ್ವಚ್ಛತೆ ಈ ಕೆಲಸಗಳಿಗೆ ಉಳಿದ 5 ಗಂಟೆಗಳು ವ್ಯಯವಾಗುತ್ತವೆ.

ಸುಮಾರು 70 ರಿಂದ 72 ಭಾಗ ಕುಟುಂಬಗಳು ಸೌದೆ ಆಯೋದಕ್ಕೆ ಹೋಗುತ್ತಾರೆ. ಇದರಲ್ಲಿ ಬಹುಪಾಲು ಮಹಿಳೆಯರೇ, ಇವರು ಮರಗಳನ್ನು ಉರುಳಿಸುವುದಿಲ್ಲ. ಬರೀ ಆಯುತ್ತಾರೆ, ಮರಗಳ ನಾಶದಿಂದ ಅವರಿಗೆ ಸೌದೆ ಸಿಗುವುದು ತುಂಬಾ ಕಷ್ಟವಾಗುತ್ತಿದೆ. 10-12 ಕೆ.ಜಿ. ಸೌದೆ ತರಲಿಕ್ಕೆ 2 ಗಂಟೆ ಕಾಲ ಹೋಗುತ್ತಾರೆ. 2-3 ದಿವಸಕ್ಕೆ ಹೀಗೆ ಹೋಗುವ ಟ್ರಿಪ್ಪುಗಳು ವರ್ಷಕ್ಕೆ 140 ಟ್ರಿಪ್ ಆಗುತ್ತವೆ. ಒಂದು ಟ್ರಿಪ್ಪಿಗೆ 5-6ಕಿ.ಮೀ. ನಡೆಯುತ್ತಾರೆ. ಅಂದರೆ ಒಂದು ವರ್ಷಕ್ಕೆ ಇವರು ನಡೆಯುವ ದೂರ ತುಮಕೂರಿನಿಂದ ಬಾಂಬೆಗೆ ಬಂದಷ್ಟು ಆಗುತ್ತೆ. ಅರಣ್ಯ ನಾಶದಿಂದ ಇನ್ನೊಂದೆಂದರೆ ಒಳ್ಳೆ ಸೌದೆ ಸಿಗದೆ ಕತ್ತಾಳೆ, ಸಗಣಿ, ಹಸಿ ಸೌದೆ ಮುಂತಾದ ಕೀಳುಮಟ್ಟದ ಇಂಧನಗಳ ಬಳಕೆ ಶುರುವಾಗುತ್ತೆ, ಸರಿಯಾಗಿ ಉರಿಯದೆ ಹೊಗೆ ಜಾಸ್ತಿಯಾಗುತ್ತದೆ. ಸಾಂಪ್ರದಾಯಕ ಒಲೆಗಳ ದಕ್ಷತೆ ಕಡಿಮೆ. ಉಷ್ಣ ಹೊರಗೆ ಬಂದು ಬಿಡುತ್ತೆ. 100 ಭಾಗ ಶಾಖದಲ್ಲಿ ಅಡಿಗೆಗೆ 10-12 ಭಾಗ ಮಾತ್ರ ಉಪಯೋಗವಾಗುತ್ತದೆ. ಹೀಗಾಗಿ ಸೌದೆ ಹೆಚ್ಚು ಬೇಕು. ಮನೆಗಳಲ್ಲಿ ಚಿಮಣಿಯಾಗಲೀ ಕಿಟಕಿಯಾಗಲೀ ಇರದೆ ಹೊಗೆ ಸುತ್ತಿಕೊಳ್ಳುತ್ತದೆ. ಒಲೆ ಸರಿಯಾಗಿ ಉರಿಯದೆ 4-4½ ಗಂಟೆ ಒಲೆ ಮುಂದೆಯೇ ಕುಳಿತಾಗ 400 ಸಿಗರೇಟು ಸೇದಿದಷ್ಟು ವಿಷಾನಿಲವನ್ನು ಸೇವಿಸುತ್ತಾರೆ,

**ನೀರಿನ ಕೆಲಸ :** ಸಾಮಾನ್ಯವಾಗಿ ನೀರು ತರುವುದು, ಪೂರ್ತಿ ಹೆಂಗಸರೇ. ಕರ್ನಾಟಕದಲ್ಲಿ 70,000 ಬೋರ್ ವೆಲ್‌ಗಳು ಹಾಕಿದ್ದರೂ ಅದು ಯಾತಕ್ಕೂ ಸಾಲದು. ಜತೆಗೆ ಉಪ್ಪು ನೀರಿನ ತೊಂದರೆ ಬೇರೆ. ಅರಣ್ಯ ನಾಶದಿಂದ ಬಾವಿಗಳಲ್ಲಿ ನೀರು ತಗ್ಗುತ್ತೆ, ಬತ್ತಿ ಹೋಗುತ್ತೆ, ಮಳೆ ನೀರು 1 ಲೀಟರು ಭೂಮಿಗೆ ಇಳಿಯಲು 1 ವರ್ಷ ಬೇಕು. ಅಂತದ್ದು ಕೊಳವೆ ಬಾವಿಗಳು 300 ಅಡಿ ವರೆಗೂ ಕೊರೆಯಲ್ಪಟ್ಟಿರುತ್ತದೆ. ಹೀಗಾಗಿ ಎತ್ತೋ ನೀರು ಜಾಸ್ತಿ, ಇಳಿಯೋ ನೀರು ಕಡಿಮೆಯಾಗಿ ನೀರು ಸಿಕ್ಕುವುದು ತುಂಬಾ ಕಷ್ಟವಾಗಿದೆ. ನೀರು ಸಂಗ್ರಹಣೆ ಮಹಿಳೆಯರ ಒಂದು ದೊಡ್ಡ ಬವಣೆಯೇ ಆಗಿದೆ.

**ಜಾನುವಾರು :** ಕೊಟ್ಟಿಗೆ ಕಸ ತೆಗೆಯುವುದು,

ಮೇಯಿಸುವುದು, ಮೇವು ಹಾಕುವುದು, ಹಾಲು ಕರೆಯುವುದು ಇತ್ಯಾದಿಗಳಿಗೆ 2ರಿಂದ 2½ ಗಂಟೆ ಮಹಿಳೆಯರು ವ್ಯಯಿಸುತ್ತಾರೆ. ಗೋಮಾಳಗಳು, ಸಾರ್ವಜನಿಕ ಜಾಗಗಳು ಸಂಪೂರ್ಣ ಆಕ್ರಮಿಸಿಕೊಳ್ಳಲ್ಪಟ್ಟಿರುವುದರಿಂದ ಜಾನುವಾರಿಗೆ ಮೇವು ಸಿಗುವುದು ಕಷ್ಟ. ಎಷ್ಟೋ ದೂರ ಮೇವು ಹುಡುಕುತ್ತಾ ಅಲೆಯಬೇಕು. ಅರಣ್ಯ ನಾಶದಿಂದ ತೆರೆದ ಜಾಗಗಳ ಮೇಲೆ ನೇರ ಬಿಸಿಲು ಬೀಳುವುದರಿಂದ ಲಂಟಾನ, ಪಾರ್ಥೇನಿಯಂ, ಇಪಟೋರಿಯಂ ಮುಂತಾದ ಕೆಲಸಕ್ಕೆ ಬಾರದ ಪೊದೆಗಳು ಜಾಸ್ತಿಯಾಗಿವೆ. ಅರಣ್ಯ ಇಲಾಖೆ ತೆರೆದ ಜಾಗಗಳಲ್ಲಿ ನೀಲಗಿರಿ, ಜಾಲಿ, ಅಕೇಸಿಯಾ, ಸರ್ವೆ ಮುಂತಾದ ಜಾನುವಾರಗಳಿಗೆ ಏನೇನೂ ಉಪಯೋಗವಿಲ್ಲದ ಮರಗಳನ್ನು ಹಾಕ್ತಾರೆ. ಅವರಿಗೆ ಜಾನುವಾರಗಳು ಮೇಯೋದು ಬೇಕಿಲ್ಲ. ಆದರೆ ಹೆಂಗಸರಿಗೆ ಬೇಕಾಗಿರುವುದು ಮೇವು.

**ಕೃಷಿಯಲ್ಲಿ ಮಹಿಳೆ :** ಕೃಷಿಯಲ್ಲಿ ಮಹಿಳೆ ಮುಖ್ಯವಾಗಿ ಮಾಡುವ ಕೆಲಸಗಳೆಂದರೆ 1) ನಾಟಿ 2) ಕಳೆ ತೆಗೆಯೋದು 3) ಕೊಯಿಲು. ವರ್ಷಕ್ಕೆ 400 ಗಂಟೆಗಳ ಕಾಲ ಮಹಿಳೆ ಕೃಷಿಯಲ್ಲಿ ಕೆಲಸ ಮಾಡುತ್ತಾಳೆ (ಪುರುಷ 500 ಗಂಟೆ). 100 ಗಂಡಸರಿಗೆ 75 ಹೆಂಗಸರು ಕೃಷಿಯಲ್ಲಿದ್ದಾರೆ. ನಾಟಿ ಮಾಡುವಾಗ ಅರ್ಧ ಬಗ್ಗಿಯೇ ಕೆಲಸ ಮಾಡಬೇಕು, ಕಳೆ ಕೀಳಲು ಅರ್ಧ ಕುಳಿತು–ಮಂಡಿಯ ಮೇಲೆ ಕೆಲಸ ಮಾಡಬೇಕು. ಕುಯಿಲಿಗೂ ಅರ್ಧ ಬಗ್ಗಿಯೇ ಇರಬೇಕು. ಒಟ್ಟಿನಲ್ಲಿ ಹೇಳಬೇಕಾದರೆ ಇವು ಮೂರೂ **ಕತ್ತೆ ಕೆಲಸ**. ನಾಟಿ ಹಾಕಬೇಕಾದರೆ ನಿರ್ದಿಷ್ಟ ಅವಧಿಯಲ್ಲಿಯೇ ಹಾಕಬೇಕು. ಅದಕ್ಕೆ ನೀರಿರಬೇಕು. ಮಳೆ ಬಂದಾಗ, ನೀರು ಬಿಟ್ಟಾಗ ಮಾಡಿಬಿಡಬೇಕು. ಲೇಟಾದರೆ ನೀರು ಸಿಗಲ್ಲ. ಸಕಾಲದಲ್ಲಿ ಮಾಡದಿದ್ದರೆ ಇಳುವರಿ ಕಮ್ಮಿಯಾಗಿ ಬಿಡುತ್ತದೆ. ಇಂತಹ ಸಮಯದಲ್ಲಿ 15 ದಿನಗಳಲ್ಲಿ ನಾಟಿಯಾಗಿಬಿಡಬೇಕಾಗಿರುವ ಸಂದರ್ಭದಲ್ಲಿ ಮಹಿಳೆಯರು 10-12 ಗಂಟೆಗಳು ಸತತವಾಗಿ ಕೆಲಸ ಮಾಡುತ್ತಾರೆ. ತಟ-ತಟ ಮಳೆಯಲ್ಲಿ ಕೆಲಸ. ಮಂಡಿಯವರೆಗೂ ನೀರಿರುವ ಗದ್ದೆಯಲ್ಲಿ ನಿಂತು ಕೆಲಸ ಮಾಡಬೇಕು.

ಕಳೆ ನಾಟಿಯಷ್ಟು ನಿರ್ದಿಷ್ಟವಾದ ಅವಧಿಯನ್ನು ಬಯಸದಿದ್ದರೂ ಮೊದಲನೇ ಕಳೆಗೂ ಭತ್ತಕ್ಕೂ ಅನೇಕ ಸಮಯ ವ್ಯತ್ಯಾಸ ಗೊತ್ತಾಗದೆ ವಿಶೇಷ ಗುರುತಿಸುವ ಕುಶಲತೆ ಬೇಕಾಗುತ್ತದೆ.

ಕೊಯಿಲು ಮಾಡುವಾಗ ಗದ್ದೆಯಲ್ಲಿ ತೇವಾಂಶ ಇದ್ದೇ ಇರುವುದರಿಂದ ಕುಯ್ಯುವುದು ಕಷ್ಟವಾಗುತ್ತೆ. ಮಹಿಳೆ ಇಲ್ಲದೆ ಇದ್ಯಾವುದೂ ನಡೆಯುವುದಿಲ್ಲ. ಕೊಯಿಲಾದ ಮೇಲೆ ಬಡಿದು ತುಂಬಿದರೆ ಅವರ ಕೆಲಸ ಮುಗಿಯಿತು. ಅಲ್ಲಿಂದ ಮುಂದೆ ಬೆಲೆ ಕಟ್ಟುವ ಕೆಲಸವೆಲ್ಲಾ ಗಂಡಸರದ್ದೇ. ಇಷ್ಟೆಲ್ಲಾ ಮಾಡುವ ಮಹಿಳೆಯರಿಗೆ ಬೆಳೆ ಹೇಗಿರಬೇಕು ಎಂದು ನಿರ್ಧರಿಸುವ ಯಾವ ಅವಕಾಶವೂ ಇರುವುದಿಲ್ಲ.

**ಬೇರೆ ಉಪ ಉದ್ಯಮಗಳು :** ಎಣ್ಣೆ ತೆಗೆಯುವುದು, ಬೆಲ್ಲ ಮಾಡುವುದು, ರೋಡು ಮಾಡುವುದು ಇಂತಹ ಕೆಲಸಗಳು. ಇಲ್ಲಿ ಮಹಿಳೆಯರಿಗೆ ನೈಪುಣ್ಯತೆ ಇಲ್ಲ ಎಂಬ ನಂಬಿಕೆ. ಸಿಗುವ ಸಂಬಳವಂತೂ ತುಂಬಾ ಕಡಿಮೆ.

ಜಾನುವಾರು ಉಪಯೋಗಿಸಿ ಮಾಡುವಂತಹ ಹೊಲ ಉಳುವುದೋ, ಗಾಣ ಆಡಿಸುವುದೋ ಇತ್ಯಾದಿಗಳು ಮಹಿಳೆಗೆ ನಿಷಿದ್ಧ. ಇದನ್ನು ನಾವು ಪರಿಶೀಲಿಸಬೇಕಾಗಿದೆ.

ಒಟ್ಟಾರೆಯಲ್ಲಿ ತೆಗೆದುಕೊಂಡರೆ ಮಹಿಳೆಯ ಕೆಲಸಗಳಲ್ಲಿ 48% ಮನೆ ಕೆಲಸಕ್ಕೂ, 32% ಜಾನುವಾರುಗಳಿಗೂ, 19% ಕೃಷಿಗೂ ವ್ಯಯವಾಗುತ್ತದೆ. ಮಹಿಳೆಯ 66 ಗಂಟೆಗಳ ಕಾಲದ ಕೆಲಸಕ್ಕೆ ಗಂಡಸರ ಕೆಲಸ 34 ಗಂಟೆಗಳು ಮಾತ್ರ.

**ಆರೋಗ್ಯ ಮತ್ತು ಮಹಿಳೆ :** ಮನೆಗಳಲ್ಲಿ ಹೊಗೆಯಿಂದ ಉಂಟಾಗುವ ವಾಯುಮಾಲಿನತೆಯಿಂದ ಸಣ್ಣ ವಯಸ್ಸಿನಿಂದಲೇ ತೀವ್ರ ಶ್ವಾಸನಾಳದ ರೋಗಗಳು, ದಮ್ಮು ಇತ್ಯಾದಿ ಉಂಟಾಗುತ್ತವೆ. ಹೊಗೆಯಲ್ಲಿರುವ $Co, Co_2$ಗಳಿಂದ ವಿಪರೀತ ಕಣ್ಣುರಿ, ತಲೆನೋವು ಉಂಟಾಗುತ್ತದೆ. ನೀರಿನಲ್ಲಿ ಹೆಚ್ಚು ಕಾಲ ಕಳೆಯುವುದರಿಂದ, ನೀರು ತರುವುದು ಬಟ್ಟೆ ಒಗೆಯೋದು, ಪಾತ್ರೆ ತೊಳೆಯೋದು, ಗದ್ದೆಗಳಲ್ಲಿ ನೀರಿನಲ್ಲಿ ನಿಂತು ಕೆಲಸ ಮಾಡುವುದು ನೀರು ಸಂಬಂಧೀ ರೋಗಗಳೆಲ್ಲಾ ಮೊದಲಿಗ ತಗುಲುವುದು ಮಹಿಳೆಯರಿಗೆ. ಕೃಷಿಯಲ್ಲಿ ಬಗ್ಗಿ ಕೆಲಸ ಮಾಡುವುದರಿಂದ ಕರುಳು ಬೇನೆ, ಸಂಧಿವಾತ ಇತ್ಯಾದಿಗಳು ಬಹು ಬೇಗ ತಲೆದೋರುತ್ತವೆ.

ಸೌದೆ-ಮೇವುಗಳಿಗೆ ಒಂದೇ ಸಮನೆ ನಡೆಯುವುದ

ರಿಂದ ಸುಸ್ತು, ವಿಪರೀತ ಕಾಲು ಒಡೆಯುವುದು. ಕೈ-ಕಾಲು, ಮೈ-ಕೈ ನೋವು ಸರ್ವೇ ಸಾಮಾನ್ಯ.

ಹಿಂದೆಲ್ಲಾ ಗಿಡ ಮೂಲಿಕೆ ಔಷಧಿಗಳ ಅಪಾರ ಜ್ಞಾನವನ್ನು ಹೊಂದಿದ್ದ ಹೆಂಗಸರು ತಮ್ಮ ಕಾಯಿಲೆಗಳಿಗೆ ಏನೋ ಒಂದು ಔಷಧಿ ಮಾಡಿಕೊಳ್ಳುತ್ತಿದ್ದರು. ಈಗ ಪರಿಸರ ನಾಶದಿಂದ ಗಿಡಮೂಲಿಕೆಗಳು ಸಿಗುವುದಿಲ್ಲ. ಇನ್ನೊಂದು ಕಡೆ ಆಧುನಿಕ ವೈದ್ಯಕೀಯ ವ್ಯವಸ್ಥೆ ತನ್ನ ಮೇಲೆ ಉಂಟು ಮಾಡಿರುವ ಅವಲಂಬನೆ. ಅವರ ಜ್ಞಾನ ವನ್ನು ಬದಿಗೆ ಸರಿಸಿದೆ.

**ವಿಜ್ಞಾನ-ತಂತ್ರಜ್ಞಾನ ಮತ್ತು ಮಹಿಳೆ :** ಇಂದಿನ ಯಾವ ತಂತ್ರಜ್ಞಾನವನ್ನು ತಗೊಂಡರೂ ಹೆಂಗಸರನ್ನು ದೃಷ್ಟಿಯಲ್ಲಿಟ್ಟುಕೊಂಡು ಮಾಡಿದಂತವಲ್ಲ. ಅಸ್ತ್ರ ಒಲೆ ಕೂಡ ಇಂಧನದ ಉಳಿತಾಯವನ್ನು ಮನಸ್ಸಿನಲ್ಲಿಟ್ಟು ಕೊಂಡು ತಯಾರಿಸಿದ್ದೇ ಹೊರತು ಹೆಂಗಸರ ಬವಣೆಯ ನ್ನಲ್ಲ. ಅದನ್ನು ಹಾಕಬೇಕಾದರೆ ಅದನ್ನು ಉಪಯೋಗಿ ಸುವ ಹೆಂಗಸರನ್ನು ಅದರಲ್ಲಿ ಒಳಗೊಳ್ಳಿಸಿಕೊಳ್ಳಲಾಗುವು ದಿಲ್ಲ. ಹೀಗಾಗಿ ತುಂಬಾ ದಕ್ಷತೆಯ ಈ ಒಲೆಯ ಬಳಕೆ ಯಾಗುತ್ತಿರುವುದು 40 % ಮಾತ್ರ.

ಬಯೋ ಗ್ಯಾಸ್ ಪ್ಲಾಂಟ್‌ಗಳದ್ದೂ ಇದೇ ಕತೆ. ಬಡ ಮಹಿಳೆಯರಿಗೆ ಇದರಿಂದ ಏನೂ ಉಪಯೋಗ ವಾಗಿಲ್ಲ. ಅವರ ಅಡಿಗೆಗೆ ಅದು ಉಪಯೋಗವಾಗಿಲ್ಲ.

ಇನ್ನು ಸೌರ ಒಲೆ. ಸೌರ ಒಲೆ ಅನ್ನ-ತರಕಾರಿ-ಬೇಳೆಗಳನ್ನೂ ಮಾತ್ರ ಬೇಯಿಸಿ ಕೊಡುತ್ತೆ. ಬೇಳೆ-ಅಕ್ಕಿ ಗಳೇ ಇಲ್ಲದ ಬಡವರಿಗೆ ಇದು ಉಪಯೋಗವಿಲ್ಲ. ಮನೆಯ ಹೊರಗಡೆ ಮಾಡಿನಲ್ಲಿ ಇಡಬೇಕು ಇದನ್ನು. ಸಣ್ಣ ಮನೆಗಳದ್ದು ಇಳಿಜಾರಾದ ಮಾಡು. ಅಲ್ಲಿ ಇಡಲಾ ಗದು. ಕೆಳಗೆ ಇಟ್ಟರೆ ನಾಯಿಗಳ ಕಾಟ. ಅಲ್ಲದೆ ಒಳಗಡೆ ಮಾಡುವ ಅಡುಗೆಯನ್ನು ಹೊರಗೆ ಮಾಡಲು ಹೆಂಗಸರು ಇಷ್ಟಪಡಲ್ಲ. ಜತೆಗೆ ದುಡ್ಡು ಜಾಸ್ತಿ.

ಕೃಷಿ ಕ್ಷೇತ್ರದಲ್ಲಿ ಕಳೆ ನಾಶಕಗಳ, ನಾಟಿ ಯಂತ್ರಗಳ ಆಗಮನದಿಂದ ಹೆಂಗಸರ ಕೆಲಸಗಳು ಹೋಗುತ್ತಿವೆ. ಏಕೆಂ ದರೆ ಇದನ್ನು ಉಪಯೋಗಿಸುವವರು ಗಂಡಸರು.

ಪರಿಸರ ವಿನಾಶದಿಂದ ಪೊದೆಗಳೆಲ್ಲಾ ಮಾಯವಾ ಗುತ್ತಿರುವುದರಿಂದ ಹೆಂಗಸರಿಗೆ ಶೌಚಕ್ಕೆ ತುಂಬಾ ತೊಂದರೆ ಯಾಗಿದೆ. ಸರಕಾರ ಕಟ್ಟುವ ಶೌಚಾಲಯಗಳು ಅವರಿಗೆ ಉಪಯೋಗವಿಲ್ಲ. ಕಡಿಮೆ ನೀರು ಉಪಯೋಗಿಸುವಂತಹ ಶೌಚಾಲಯಗಳನ್ನು ರೂಪಿಸಿಲ್ಲ.

ತಂತ್ರಜ್ಞಾನವೆಲ್ಲ ಯಾಕೆ ಉಪಯೋಗ ಆಗ್ತಾ ಇಲ್ಲ ಅಂದರೆ ಯಾವ ಹಂತದಲ್ಲೂ ಉಪಯೋಗಿಸುವ ಮಹಿಳೆ ಯರನ್ನು ಒಳಗೊಳ್ಳಿಸಿ ಕೊಳ್ಳುವುದಿಲ್ಲ. ಎಲ್ಲೋ ಕುಳಿತು ಸಮಸ್ಯೆ ಹೀಗಿರಬಹುದು ಎಂದು ಊಹಿಸಿ ಮಾಡುತ್ತಾರೆ ಅಷ್ಟೆ. ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆ ಇಲ್ಲದಿರು ವುದು ಇಲ್ಲಿನ ಮುಖ್ಯ ಕೊರತೆ.

ಇಂತಹ ಪರಿಸ್ಥಿತಿಯಲ್ಲಿ ಪರಿಸರವಾದ ಮತ್ತು ಸ್ತ್ರೀ ವಾದಗಳು ಒಂದುಗೂಡಿಸುವುದು ನಮ್ಮ ಕೆಲಸ.

['ಅಭಿವೃದ್ಧಿಯಲ್ಲಿ ಸ್ತ್ರೀ ಪ್ರಜ್ಞೆ' ಶಿಬಿರದಲ್ಲಿ ಸಸ್ಯ ವಿಜ್ಞಾನಿ ಡಾ|| ಶೈಲಜಾ ಅವರು ನೀಡಿದ ಉಪನ್ಯಾಸದ ಸಂಗ್ರಹ ಇದು]

---

## ನನ್ನವ್ವ

ಕೈಗೆಟುಕದ
ನನ್ನವ್ವ
ಇಡಿಯಾಗಿ
ಹಿಡಿಯಲು ಹೋದರೆ
ಹುಡಿ ಹುಡಿಯಾಗಿ
ಸುರಿದು ಹೋಗುತ್ತಾಳೆ
ನುಡಿಗೆ ಸಿಕ್ಕದೆ
ಒಳಗೆಲ್ಲಾ
ಕುಡಿಯೊಡೆಯುತ್ತಾಳೆ

ಮೋಜಿನ ಕಣ್ಣಿಗೆ
ಕಾಣದ ನನ್ನವ್ವ
ಒಂದು ಸೋಜಿಗ !
ಗೋಜಲಾದಾಗ
ನವುರಾಗಿ ಬಿಡಿಸುವ
ಅವ್ವನ,
ಬಸಿರೊಳಗೆ
ಒಮ್ಮೆ ಮಿಸುಕಾಡಿದ್ದೆ ಅದಕ್ಕೆ
ಇನ್ನು ಉಸಿರಾಡುತ್ತಿರುವೆ

**ಸರಸ್ವತಿ ಮ.**

# ಮನೆ ಮದ್ದು–ಮನೆ ಮಡದಿಗೊಂದು ಪುನರ್ ಮನ್ನಣೆ

ನಿರೂಪಣೆ : **ಚೇನಂಡ ಗಂಗಮ್ಮ**

ಮಹಿಳೆಗೂ ಗಿಡಮೂಲಿಕೆ ಔಷಧಿಗಳಿಗೂ ಬಿಡಿಸಲಾರದ ಸಂಬಂಧ! ಹಳ್ಳಿಗಳಲ್ಲಿ ಸಾಮಾನ್ಯವಾಗಿ ಪ್ರತಿಯೊಬ್ಬ ಮಹಿಳೆಗೂ "ಮನೆ ಔಷಧಿ" ಗೊತ್ತು. ಪರಿಣತರಲ್ಲದೇ ಹೋದರೂ ಇದರ ಪರಿಚಯ, ಜ್ಞಾನ ಇಲ್ಲದೇ ಇರುವಂತಹವರಂತೂ ಇಲ್ಲವೇ ಇಲ್ಲ. ಅಡಿಗೆ ಮಾಡಿ ಉಣಬಡಿಸುವುದು ಎಷ್ಟು ಸಹಜವೋ ಅಷ್ಟೇ ಸಹಜ ಮನೆಯಲ್ಲಿ ಯಾರಿಗಾದರೂ ಆರೋಗ್ಯ ತಪ್ಪಿದಾಗ ಮನೆ ಔಷಧಿ ಮಾಡುವುದು. ಮಹಿಳೆಯರ ಇಂತಹ ಜ್ಞಾನ ಭಂಡಾರದಿಂದಲೇ ಈ ಹೊತ್ತು ನಾವು ಒಂದು ಸಾವಿರದ ವರೆಗೂ ಗಿಡಮೂಲಿಕೆಯ ಔಷಧಿಗಳನ್ನು ಗುರುತಿಸಿದ್ದೇವೆ. ಹೀಗೆ ಗುರುತಿಸಲ್ಪಟ್ಟವಲ್ಲಿ ಸಾಮಾನ್ಯವಾಗಿ ಬರುವ ಎಲ್ಲಾ ಕಾಯಿಲೆಗಳಿಗೂ ಮದ್ದುಂಟು. ಪರಿಣಾಮ ಸ್ವಲ್ಪ ನಿಧಾನವಾದರೂ ಪ್ರಯೋಜನವಂತೂ ಖಂಡಿತಾ ಇದೆ. ಇವು ಶರೀರಕ್ಕೆ ಒಳ್ಳೆಯದೇ ಹೊರತು ದುಷ್ಪರಿಣಾಮಕಾರಿಯಂತೂ ಅಲ್ಲವೇ ಅಲ್ಲ. ಅಲ್ಲದೆ ಪರಂಪರಾಗತವಾಗಿ ಹರಿದು ಬಂದ ಜ್ಞಾನದ ತಳಪಾಯವೂ ಭದ್ರವೇ.

ಇಷ್ಟಿದ್ದೂ ಇಂದು ಗಿಡಮೂಲಿಕೆ ಔಷಧಿಗಳು ತೀರಾ ಅವಜ್ಞೆಗೆ ಒಳಗಾಗಿಬಿಟ್ಟಿವೆ. ಆಧುನಿಕ ವೈದ್ಯಕೀಯ ಇಂದು ತನ್ನ ಮೇಲೆ ಎಷ್ಟರ ಮಟ್ಟಿಗಿನ ಅವಲಂಬನೆಯನ್ನು ಬೆಳೆಸಿಬಿಟ್ಟಿದೆಯೆಂದರೆ ಮಾತ್ರೆ ಇಂಜಕ್ಷನ್‌ಗಳನ್ನು ತೆಗೆದುಕೊಂಡಾಗಲೇ ಸಮಾಧಾನ, ತೃಪ್ತಿ, ನಿರಾಳ! ಅಲ್ಲದೆ ಗುಂಡುಗಿನ ಮಾತ್ರೆಯನ್ನು ನೀರಿನ ಜತೆ ಗುಳಂ ಎಂದು ನುಂಗುವುದು, ಗಿಡಮೂಲಿಕೆಗಳನ್ನು ಅರೆದು ಹಿಂಡಿ ಕಹಿ ಒಗರಿನ ರಸವನ್ನು ಕುಡಿಯುವುದಕ್ಕಿಂತ ತುಂಬಾ ಆರಾಮ. ಅರ್ಧ ಘಂಟೆಯಲ್ಲೇ ಪರಿಣಾಮ ಕೊಡುವ ವಿಸ್ಮಯಕಾರೀ ಔಷಧಿಗಳ ಮುಂದೆ ಮನೆಮದ್ದು ಎಷ್ಟರದು ಎಂಬ ಉದಾಸೀನ ಜನರಲ್ಲಿ ಬಲುಬೇಗ ಮೂಡಿಬಿಟ್ಟಿದೆ. ಆಧುನಿಕ ವ್ಯವಸ್ಥೆಗಳ ಸ್ವರೂಪವೇ ಇಂತದ್ದು. ಸಾವಿರಾರು ವರ್ಷಗಳ ಇತಿಹಾಸವನ್ನು ರಾತ್ರಿ ಕಳೆದು ಬೆಳಗಾಗುವುದರಲ್ಲಿ ಮೂಲೆಗುಂಪಾಗಿಸಿಬಿಡಬಲ್ಲ ಚಾಣಾಕ್ಷತೆ ಇದರದ್ದು. ಆರೋಗ್ಯ ಕಾರ್ಯಕ್ರಮದ ಹೆಸರಲ್ಲಿ ಆಧುನಿಕ ವೈದ್ಯಕೀಯ ವ್ಯವಸ್ಥೆ ತಳಮಟ್ಟದವರೆಗೂ ತನ್ನ ವ್ಯವಸ್ಥಿತ ಜಾಲವನ್ನು ಹರಡಿಬಿಟ್ಟಾಗ, ಸಾಂಪ್ರದಾಯಿಕ ವೈದ್ಯಕೀಯ ಜ್ಞಾನವನ್ನು ಹೊಂದಿದ್ದ ಮಹಿಳೆಯರು ಬಲುಬೇಗ ಮೂಲೆಗುಂಪಾದರು. ಕುಟುಂಬ-ಹಳ್ಳಿಗಳಲ್ಲಿ ಸಣ್ಣ ಸಣ್ಣ ವೈದ್ಯೆಯರಂತೆ ಇದ್ದ ಮಹಿಳೆಯರು ತಮ್ಮ ಸ್ಥಾನವನ್ನು ಮರುಮಾತಿಲ್ಲದೆ ಬಿಟ್ಟುಕೊಡಬೇಕಾಯಿತು.

ಇದರ ಜತೆಗೆಯೇ ಅಭಿವೃದ್ಧಿ, ಯೋಜನೆಗಳಿಗಾಗಿ ನಿರಂತರವಾಗಿ ಕಾಡು ನಾಶವಾಗುತ್ತಲೇ ಬರುತ್ತಿರುವ ಇಂದಿನ ಸ್ಥಿತಿಯಲ್ಲಿ ಹತ್ತಿರದ ಸಣ್ಣ ಕಾಡೂ ಬಯಲಾಗುತ್ತಾ ಜತೆಜತೆಗೇ ತನ್ನ ಒಡಲಲ್ಲಿ ತುಂಬಿಕೊಂಡಿದ್ದ ಸಮೃದ್ಧ ಗಿಡಮೂಲಿಕೆ ಔಷಧಿಗಳ ನಾಶವನ್ನು ಕಂಡಿದೆ. ಕೈ-ಕಾಲಿಗೆ ತೊಡರಿಕೊಳ್ಳುತ್ತಿದ್ದ ಒಂದು ಔಷಧಿಯ ಬಳ್ಳಿಯನ್ನು ಇಂದು ಮುಳ್ಳುಕಂಟೆಗಳ ಮಧ್ಯದಲ್ಲಿ ಅಲೆಯುತ್ತಾ ಹುಡುಕಬೇಕಾಗಿದೆ. ಇಷ್ಟೊಂದು ಸರಾಗವಾಗಿ ಆಧುನಿಕತೆ ಜನರನ್ನು ತಮ್ಮ ಬದುಕುಗಳಿಂದ ಪರಕೀಯಗೊಳಿಸಿದೆ.

ವೈದ್ಯಕೀಯದ (ಆಧುನಿಕ) ವ್ಯಾಪಾರೀಕರಣವಾಗುವುದರಿಂದ ಆರೋಗ್ಯ ಕಾರ್ಯಕ್ರಮಗಳ ಹೆಸರಲ್ಲಿ ಗ್ರಾಮೀಣ ಜನತೆಯ ಶೋಷಣೆಯಾಗುತ್ತದೆಯೇ ವಿನಃ ದೊಡ್ಡ ಉಪಕಾರವೇನೂ ಆಗುತ್ತಿಲ್ಲ. ಅದರ ಪ್ರಯೋಜನ ಪಡೆಯಲು ಸಾಧ್ಯವಾಗುತ್ತಿರುವುದು ಶೇ. 20 ಜನರಿಗೆ ಮಾತ್ರ. ಅದೂ ನಗರಗಳಲ್ಲಿ. ಅತ್ತ ಗಿಡಮೂಲಿಕೆಗಳನ್ನೂ ಬಳಸಲಾರದ ಇತ್ತ ಆಧುನಿಕ ವೈದ್ಯಕೀಯದ ಪ್ರಯೋಜನವನ್ನೂ ಪಡೆಯಲಾರದ ಗ್ರಾಮೀಣ ಜನರ ಸ್ಥಿತಿ ಎಡಬಿಡಂಗಿಗಳಾಗಿದೆ.

ಆದರೆ ಅದೃಷ್ಟವಶಾತ್ ಇಂದು ಗಿಡಮೂಲಿಕೆ ಔಷಧಿಗಳ ಬಗ್ಗೆ ಕಾಳಜಿ ಅನೇಕ ಸಂಘ-ಸಂಸ್ಥೆಗಳಲ್ಲಿ, ವ್ಯಕ್ತಿಗಳಲ್ಲಿ ಕಂಡುಬರುತ್ತಿದೆ. ಮತ್ತೂ ಆಶ್ಚರ್ಯವೆಂದರೆ ಅರಣ್ಯ ಇಲಾಖೆಯೇ ಇಂದು ಎಕರೆಗಟ್ಟಲೆ ಪ್ರದೇಶಗಳಲ್ಲಿ ಔಷಧಿಯ ಗಿಡಗಳನ್ನೇ ಬೆಳೆಸುವ ಕಾರ್ಯಕ್ರಮಗಳನ್ನೂ ಹಮ್ಮಿಕೊಂಡಿದೆ. ಗಿಡಮೂಲಿಕೆ ಔಷಧಿಗಳಿಗೆ ಪುನರ್ ಮನ್ನಣೆಯನ್ನು ತಂದುಕೊಟ್ಟು ಅದರ ಬಳಕೆಗಾಗಿ ಜನರನ್ನು ಹುರಿದುಂಬಿಸುವುದು ಇಲ್ಲೆಲ್ಲಾ ಇರುವ

ಕಳಕಳಿ. ಇದೊಂದು ಸಂತೋಷದ ಸಂಗತಿಯೇ. ಆದರೆ, ಗಿಡಮೂಲಿಕೆ ಔಷಧಿಗಳಂತಹ ಸಾಂಪ್ರದಾಯಿಕ ಚಿಕಿತ್ಸಾ ವಿಧಾನದ ಪುನರ್‌ಸಂಘಟನೆಯಲ್ಲಿ ಒಂದು ಅಂಶ ವನ್ನು ತುಂಬಾ ಮುಖ್ಯವಾಗಿ ಗಣನೆಗೆ ತಂದುಕೊಳ್ಳು ವುದು ಅವಶ್ಯಕವಾಗುತ್ತದೆ ಮತ್ತು ನಮ್ಮಂತಹ ಮಹಿಳಾ ಕಾರ್ಯಕರ್ತೆಯರು ವಿಶೇಷವಾಗಿ ಗಮನಿಸಿಕೊಂಡಿರುವ ವಿಚಾರ ಕೂಡ ಇದಾಗಿದೆ. ಅದೆಂದರೆ, ಮಹಿಳೆಯರಲ್ಲಿದ್ದ ಯಾವತ್ತೂ ಸಾಂಪ್ರದಾಯಿಕ ಔಷಧಿಗಳ ಜ್ಞಾನವನ್ನು ಅದೊಂದು "ಜ್ಞಾನ"ವೆಂಬಂತೆ ಎಂದೂ ಪರಿಗಣಿಸಲಾಗಿರ ಲಿಲ್ಲ, ಪರಿಗಣಿಸಲಾಗಿಲ್ಲ. ಆಕೆಯ ಕುಟುಂಬದ ಹೊಣೆ ಗಾರಿಕೆಯ ಮುಂದುವರೆದ ಭಾಗ ಇದು ಎಂದು ಮಾತ್ರ ನೋಡಲಾಗಿದೆ ಅಂದಿಂದಿಂದಿಗೂ. ಪುನರ್‌ಮನ್ನಣಾ ಸಂಘಟನೆಯಲ್ಲಿ ನಾವು ಮೊಟ್ಟ ಮೊದಲನೆಯದಾಗಿ ಮಾಡುವದೆಂದರೆ ಇದೊಂದು ಅತ್ಯಮೂಲ್ಯ "ಜ್ಞಾನ" ಎಂಬುದನ್ನು ಅದನ್ನು ಪಡೆದ ಮಹಿಳೆಯರಿಗೂ, ಇತರ ರಿಗೂ ಮನದಟ್ಟು ಮಾಡಿಕೊಡುವುದು. ಇದನ್ನು ಮಹಿಳೆಯರು ಬಹುಮಟ್ಟಿಗೆ ಅಂತರಿಕಗೊಳಿಸಿಕೊಂಡಿ ದ್ದಾರೆ. ಉದಾಹರಣೆಗೆ, ಬಿಜಾಪುರದ ಮುದ್ನಾಳದ ಹಳ್ಳಿ ಯೊಂದರ ಪರವ್ವ ತುಂಬಾ ಹಿಂದಿನಿಂದಲೂ ಗಿಡಮೂಲಿಕೆ ಔಷಧಿಗಳ ಅಪಾರ ಜ್ಞಾನ ಹೊಂದಿದ್ದವಳು. ಆದರೆ ಅದನ್ನು ಆಕೆಯಾಗಲೀ, ಇತರರಾಗಲಿ ಜ್ಞಾನವೆಂದು ಪರಿಗಣಿಸಿರಲಿಲ್ಲ. ಪುನರ್‌ಮನ್ನಣಾ ಸಂಘಟನೆಯ ಭಾಗ ವಾಗಿ ಕೆಲ ಹೊಸ-ಹೊಸ ಔಷಧಿಗಳನ್ನು ಕಲಿತುಕೊಂಡ ಪರವ್ವ ಅದರ ಜತೆಗೆಯೇ ಆತ್ಮಗೌರವವನ್ನೂ ಪಡ ಕೊಂಡಳು. ವಿಸ್ಮಯಕಾರಕ ರೀತಿಯಲ್ಲಿ ಚರ್ಮರೋಗ ಗಳಿಗೆ ಪರಿಣಾಮವುಳ್ಳ ಗಿಡಮೂಲಿಕೆಗಳ ಎಣ್ಣೆಯ ಚಿಕಿತ್ಸೆಯನ್ನು (ತಯಾರಿಸುವ ವಿಧಾನವನ್ನು ಕೊನೆಯಲ್ಲಿ ಕೊಡಲಾಗಿದೆ) ಮೇಲ್ಜಾತಿ ಕುಟುಂಬದವರೊಬ್ಬರಿಗೆ ಮಾಡಲು ಈಕೆಗೆ ಕರೆ ಬಂತು. ಪರವ್ವ ಒಪ್ಪಿಕೊಂಡಳು. ಆದರೆ ಆಕೆಯನ್ನು ಮನೆಯ ಹಿಂಬದಿಗೆ ಬರಹೇಳಿದಾಗ ಮಾತ್ರ ಆಕೆ ಪ್ರತಿಭಟಿಸಿದಳು. ಚಿಕಿತ್ಸೆ ತೀರಾ ಅನಿವಾರ್ಯ ವಾಗಿದ್ದ ಆ ಕುಟುಂಬದವರು ಕೊನೆಗೆ ಆಕೆಯನ್ನು ಮುಂಬಾಗಿಲಿನಿಂದಲೇ ಬರಮಾಡಿಕೊಂಡರು. ತನ್ನ ಜ್ಞಾನವನ್ನು ಒಪ್ಪಿಕೊಳ್ಳುವಂತೆ ಆಕೆ ಇಲ್ಲಿ ಪರೋಕ್ಷವಾಗಿ ಪ್ರತಿಭಟಿಸಿದ್ದಳು. ಅಂದಿನಿಂದ ಪರವ್ವ ಹಿಂಬಾಗಿಲ ಚಿಕಿತ್ಸೆಯನ್ನು ಕೈಗೊಂಡದ್ದೇ ಇಲ್ಲ. ಬೀದರಿನ ಜನಾಬಾಯಿಯದೂ ಇಂತದೇ ಧೋರಣೆ/ಅನುಭವ. ಸಾಂಪ್ರದಾಯಿಕವಾಗಿ ಹೆರಿಗೆ ಮಾಡಿಸುತ್ತಿದ್ದ ಈಕೆ ಪುನರ್‌ಮನ್ನಣಾ ಸಂಘಟನೆಯ ಭಾಗವಾಗಿ ಇನ್ನೂ ಅನೇಕ ಚಿಕಿತ್ಸೆಗಳನ್ನು ಕಲಿತುಕೊಂಡರು. ತಾನೀಗ ಊರೂರು ಮೇಲೆ ಹೋಗಿ ಚಿಕಿತ್ಸೆ ನೀಡಿ ತನ್ನ 'ಜ್ಞಾನ' ದಿಂದ ಇತರ ನಾಲ್ಕು ಜನರಿಗೆ ಉಪಕಾರ ಮಾಡುವುದು ಈಕೆಯ ನಿಲುವು. ಇದಕ್ಕಾಗಿ ಯಾವ ಹಣವನ್ನೂ ತೆಗೆದುಕೊಳ್ಳದಿರುವುದು ಆಕೆಯ ನಿರ್ಧಾರ. ಇದರಿಂದ ತನಗೆ ಸಿಗುವ ಮರ್ಯಾದೆ, ತನ್ನನ್ನು ವೈದ್ಯೆಯಂತೆ ಜನ ಪರಿಗಣಿಸುವುದೇ ಈಕೆಗೆ ಮನ್ನಣೆ.

ಮಹಿಳೆಯರು ಈ ನಿಟ್ಟಿನಲ್ಲಿ ಸಹಕಾರಿಗಳನ್ನು ಪ್ರಾರಂಭಿಸಿ ಅದರ ಮೂಲಕ ಸ್ವಯಂ ಉದ್ಯೋಗಕ್ಕೆ ಎಡೆಯಾಗುವಂತಾಗಬೇಕು ಎಂಬ ವಿಚಾರಕ್ಕೆ ಅರಣ್ಯ ಇಲಾಖೆ ಮತ್ತು ಖಾದಿ ಗ್ರಾಮೋದ್ಯೋಗಗಳು ತಮ್ಮ ಆಸಕ್ತಿ ವ್ಯಕ್ತಪಡಿಸಿವೆ. ಅರಣ್ಯ ಇಲಾಖೆ ಬೇಕಾಗುವ ಜಾಗವನ್ನೂ, ಖಾದಿ ಗ್ರಾಮೋದ್ಯೋಗ ಹಣ ಸಹಾಯ ವನ್ನೂ ನೀಡಲು ಜಂಟಿಯಾಗಿ ಮುಂದೆ ಬಂದಿವೆ. ಇದಿನ್ನೂ ಯೋಚನೆಯ ಹಂತದಲ್ಲೇ ಇದೆ. ಈ ಯೋಚನೆ ಕಾರ್ಯರೂಪಕ್ಕೆ ಬಂದಾಗ ಪುನರ್ ಮನ್ನಣಾ ಸಂಘಟನೆಗೆ ತನ್ನ ನಿಜಾರ್ಥ ಪಡಕೊಳ್ಳುವುದು ದೂರವಿಲ್ಲ.

**ಗಿಡಮೂಲಿಕೆ ಎಣ್ಣೆಯ ಬಗ್ಗೆ :**

ಯಾವುದೇ ಬಗೆಯ ಚರ್ಮ ವ್ಯಾಧಿಗೆ ಸಿದ್ಧೌಷದ. ಹುಳಕಡ್ಡಿ, ಎಕ್ಸಿಮಾ, ಗಾಯ, ಸುಟ್ಟು-ಬೆಂದು ಹೋದದ್ದು, ತಲೆಹೊಟ್ಟು, ತಲೆಹುಣ್ಣು ಮೂಲವ್ಯಾದಿ....ಇತ್ಯಾದಿ, ಅಲ್ಲದೆ ಬೆನ್ನುನೋವು, ಸಂದಿವಾತ ಇತ್ಯಾದಿಗಳಿಗೆ ಹಚ್ಚಿ ಉಜ್ಜಬಹುದು.

1 ಲೀಟರ್ ಗಿಡಮೂಲಿಕೆಗಳ ಎಣ್ಣೆ ತಯಾರಿಸಲು

ವೀಳೆದೆಲೆ—700 ಗ್ರಾಂ
ಬಿಳಿಪೊಂಗರೆ—700ಗ್ರಾಂ
ಶತಾವರಿ ಬೇರು—700 ಗ್ರಾಂ
ಲೋಳೆಸರ—700ಗ್ರಾಂ
ನುಗ್ಗೆಸೊಪ್ಪು—700ಗ್ರಾಂ
ಹೊಂಗೆಚಕ್ಕೆ—700 ಗ್ರಾಂ
ಚಿಕ್ಕಈರುಳ್ಳಿ—700 ಗ್ರಾಂ
1 ಲೀಟರ್ ಅಕ್ಕಿ ತೊಳೆದ ನೀರು

ಮೇಲಿನ ಎಲ್ಲವನ್ನೂ ಚೆನ್ನಾಗಿ ಜಜ್ಜಿ ರಸ ಹಿಂಡಿ ಅಕ್ಕಿ

ತೊಳೆದ ನೀರಿನಲ್ಲಿ ಸೋಸಿಕೊಂಡು ಅದರ ಜತೆಗೇ ಕುದಿಯಲು ಇಡಬೇಕು. ಅರ್ಧ ಪ್ರಮಾಣಕ್ಕೆ ಇಂಗುವ ತನಕ ಕುದಿಸಬೇಕು. ನಂತರ ಯಾವುದಾದರೂ ಎಣ್ಣೆಯನ್ನು (ಬೇವಿನೆಣ್ಣೆ, ತೆಂಗಿನೆಣ್ಣೆ, ಹೊಂಗೆಎಣ್ಣೆ, ಹರಳೆಣ್ಣೆ, ಸೂರ್ಯಕಾಂತಿಎಣ್ಣೆ) ಒಂದು ಲೀಟರು ಹಾಕಿ ಚೆನ್ನಾಗಿ (ಸುಮಾರು ಎರಡು ಗಂಟೆಗಳ ಕಾಲ) ಕುದಿಸಬೇಕು.

ನೀವು ಪ್ರಯತ್ನಿಸಿ. ಇತರರಿಗೂ ಹೇಳಿ.

---

## ಮದಾಂ ರುಸ್ತುಂ ಕಾಮಾ

ಜರ್ಮನಿಯಲ್ಲಿ 1907 ರಲ್ಲಿ ಅಂತರರಾಷ್ಟ್ರೀಯ ಸಮಾಜವಾದೀ ಅಧಿವೇಶನವೊಂದು ನಡೆಯಿತು. ಇದರಲ್ಲಿ ವಿಶ್ವದ ಅನೇಕ ರಾಷ್ಟ್ರಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದ ಮಹಿಳೆಯೊಬ್ಬಳು ಭಾರತಕ್ಕೆ ಸ್ವರಾಜ್ಯ ಬೇಕೆಂಬ ನಿರ್ಣಯವೊಂದನ್ನು ಮಂಡಿಸಿದರು. ಅದಕ್ಕೆ ಇಂಗ್ಲೆಂಡಿನ ಪ್ರತಿನಿಧಿಯೊಬ್ಬನು ವಿರೋಧಿಸಿದಾಗ ಆ ಮಹಿಳೆ ವೇದಿಕೆಯ ಮೇಲೆ ಹೋಗಿ, ತನ್ನ ಕೈಯ್ಯಲ್ಲಿದ್ದ ಬಟ್ಟೆಯ ಸುರುಳಿಯನ್ನು ಬಿಚ್ಚಿ "ಇದು ಸ್ವತಂತ್ರ ಭಾರತದ ಧ್ವಜ. ಭಾರತೀಯ ಹುತಾತ್ಮರ ರಕ್ತದಿಂದ ಪಾವನಗೊಂಡಿರುವ ಈ ಧ್ವಜವನ್ನು ನೀವೆಲ್ಲ ಗೌರವಿಸಬೇಕು. ಇದು ನನ್ನ ವಿನಂತಿ" ಎಂದು ಘೋಷಿಸಿದರು. ಇಡೀ ಸಭೆ ಎದ್ದು ನಿಂತು ಗೌರವ ಸಲ್ಲಿಸಿತು. ಅಂತರರಾಷ್ಟ್ರೀಯ ವೇದಿಕೆಯ ಮೇಲೆ ಹೀಗೆ ಭಾರತದ ಸ್ವಾತಂತ್ರ್ಯ ಕಹಳೆ ಊದಿದ ಮಹಿಳೆಯೇ ಮದಾಂ ರುಸ್ತುಂ ಕಾಮಾ.

ರುಸ್ತುಂ 1861 ಸೆಪ್ಟೆಂಬರ್ 24ರಂದು ಜನಿಸಿದರು. ಈಕೆಯ ತಂದೆ ಸೊಹ್ರಾಬ್‌ಜೀ ಫ್ರಾಂಜೀ ಪಟೇಲರು ಮುಂಬಯಿಯ ಖ್ಯಾತ ವ್ಯಾಪಾರಿಗಳಾಗಿದ್ದರು. ಮುಂದೆ ರುಸ್ತುಂರವರು ಅಡ್ವೋಕೇಟ್ ಆರ್. ಕೆ. ಕಾಮಾ ಅವರನ್ನು ಮದುವೆಯಾದರು. ಪತಿಯು, ಬ್ರಿಟಿಷರ ಮೇಲೆ ಇಟ್ಟಿದ್ದ ಅತಿಯಾದ ಅಭಿಮಾನ ಗೌರವವನ್ನು ಅತಿಯಾಗಿ ವಿರೋಧಿಸುತ್ತಿದ್ದ ರುಸ್ತುಂ, ಆ ಕಾರಣಕ್ಕಾಗಿಯೇ ನೇರವಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದರು.

1905 ರಲ್ಲಿ ಲಂಡನ್ನಿಗೆ ಹೋಗಿ ದಾದಾಬಾಯಿ ನವರೋಜಿ ಅವರ ಖಾಸಗಿ ಕಾರ್ಯದರ್ಶಿಯಾದರು. ಮರುವರ್ಷ ಅಲ್ಲಿಯೇ ಸಾವರ್‌ಕರ್ ಪ್ರಾರಂಭಿಸಿದ ಸ್ವಾತಂತ್ರ್ಯ ಹೋರಾಟಕ್ಕೆ ಸಂಪೂರ್ಣ ಬೆಂಬಲ ನೀಡಿದರು. 1910 ರಲ್ಲಿ ಸಾವರ್‌ಕರ್‌ರವರನ್ನು ಲಂಡನ್ನಿನಲ್ಲಿ ಬಂಧಿಸಿ ಹಡಗಿನಲ್ಲಿ ಕರೆದೊಯ್ಯುತ್ತಿದ್ದಾಗ, ಅವರನ್ನು ಬಿಡಿಸಲು, ರುಸ್ತುಂ ಹಾಗೂ ಎ. ವಿ. ಎಸ್. ಅಯ್ಯರ್ ಪ್ರಯತ್ನಿಸಿದರು. ಮಾರ್ಸೇಲ್ ಬಂದರಿನ ಸಮೀಪ ಒಂದು ಕಾರನ್ನು ಸಿದ್ಧಗೊಳಿಸಿ ಅವರು ಸಾವರ್‌ಕರರಿಗಾಗಿ ಕಾದು ಕುಳಿತರು. ಆದರೆ ಸಾವರ್‌ಕರರು ಓಡಿದ ಭಾಗ ಬೇರೆ ಆಯಿತು. ಸ್ಕಾಟ್‌ಲೆಂಡ್‌ಯಾರ್ಡ್ ಅಧಿಕಾರಿಗಳಿಗೆ ಸಿಕ್ಕಿಬಿದ್ದರು.

ಮದಾಂ ರುಸ್ತುಂ ಪ್ಯಾರಿಸ್, ಅಮೆರಿಕ, ಇಂಗ್ಲೆಂಡುಗಳಲ್ಲಿ ಹಲವಾರು ವರ್ಷ ಪ್ರವಾಸ ಮಾಡಿ ಭಾರತದ ಬಗ್ಗೆ ಪ್ರಚಾರ ಮಾಡಿ, ಸ್ವಾತಂತ್ರ್ಯ ಹೋರಾಟಕ್ಕೆ ಹೊರಗಿನ ವಾತಾವರಣ ಅನುಕೂಲವಾಗುವಂತೆ ಮಾಡಿದರು. ಭಾರತವಷ್ಟೇ ಅಲ್ಲದೆ ಈಜಿಪ್ಟ್ ಮತ್ತು ಚೀನಾ ದೇಶಗಳ ಪರವಾಗಿಯೂ ಪ್ರಚಾರ ಮಾಡಿದರು.

1935 ರಲ್ಲಿ ಭಾರತಕ್ಕೆ ಹಿಂತಿರುಗಿದ ಮದಾಂ ರುಸ್ತುಂ ಅನಾರೋಗ್ಯದಿಂದಾಗಿ 1936 ಆಗಸ್ಟ್ 13ರಂದು ನಿಧನರಾದರು.

ಕೃಪೆ : ಜ್ಞಾನಗಂಗೋತ್ರಿ

# ಗಸ್ತು ಹೊಡೆಯುತ್ತಿದೆ ಸಾವು, ನೆನಪಾಗುತ್ತಿದೆ ಹಲವು

**ಎಸ್. ಮಾಲತಿ**

ನನ್ನ ಮನದಲ್ಲಿ ಪ್ರೀತಿಯಿದೆ
ರಕ್ತದಲ್ಲಿ ಉನ್ಮಾದವಿದೆ
ಯಾರದೋ ಬರವಿಗಾಗಿ ಕಾಯುತ್ತೇನೆ
ಸಾವು ನನ್ನ ಮನೆಯ ಸುತ್ತ
ಗಸ್ತು ಹೊಡೆಯುತ್ತಿರುವಂತಿದೆ.

'ಹೆಣ್ಣಿಗೊಂದು ಗಂಡುಬೇಕು
ಗಂಡಿಗೊಂದು ಹೆಣ್ಣು ಬೇಕು'
ನನ್ನ ದೇಹ ನೂರು ಸೀಳಾಗಿ
ಚೀರುತ್ತ ಬಿದ್ದಿದೆ
ಯಾರದೋ ಬರವಿಗಾಗಿ ಕಾಯುತ್ತೇನೆ
ಸಾವು ನನ್ನ ಮನೆಯ ಸುತ್ತ
ಗಸ್ತು ಹೊಡೆಯುತ್ತಿರುವಂತಿದೆ.

ಎಳೆಬಿಸಿಲಿನಲ್ಲಿ ಕಾಯುತ್ತೇನೆ
ಸುರಿವ ಸೋನೆಮಳೆಯಲ್ಲಿ
ಕಾಯುತ್ತೇನೆ ಮತ್ತೆ ಮತ್ತೆ
ಬೆಳೆದ ಬೆಳಗಿನಲ್ಲಿ
ಆವರಿಸಿದ ಕತ್ತಲಿನಲ್ಲಿ
ಸಂಜೆಯ ಮಬ್ಬುಗತ್ತಲಿನಲ್ಲಿ
ಯಾರದೋ ಬರವಿಗಾಗಿ ಕಾಯುತ್ತೇನೆ
ನಾಯಕನಿಲ್ಲದ ನನ್ನ ಮನೆಯ ಸುತ್ತ
ಗಸ್ತು ಹೊಡೆಯುತ್ತಿದೆ ಸಾವು

ನೆನಪಾಗುತ್ತಿದೆ ಒಬ್ಬನ ನಗು
ಮತ್ತೊಬ್ಬನ ಹೂಮುತ್ತು
ಇನ್ನೊಬ್ಬನ ಬುದ್ಧಿ, ಮಾತುಗಳು
ಒಬ್ಬನ ಸ್ನೇಹ, ಕರುಣೆ, ಪ್ರೀತಿ
ಮತ್ತೊಬ್ಬನ ಮಮತೆ, ಅಕ್ಕರೆ,
ಇನ್ನೊಬ್ಬನ ಮೇಲೆ ಬರುವ ಮತ್ತ
ಪುಂಡಾಟಿಕೆ, ನಗೆಚಾಟಿಕೆ, ಗೇಲಿ
ಹೂನಗೆ, ಸಿಹಿನಗೆ, ಅಟ್ಟಹಾಸ
ಮುತ್ತು, ಅಪ್ಪುಗೆ, ಮುದ್ದಾಟ
ನಾನೇಕೆ ಕಾಯುತ್ತೇನೆ ಬರವಿಗಾಗಿ
ನನಗ್ಯಾರೂ ನಾಯಕರಿಲ್ಲ
ಸಾವು ಗಸ್ತು ಹೊಡೆಯುತ್ತಿದೆ
ನನ್ನ ಮನೆಯ ಸುತ್ತ.

ಪ್ರೀತಿ ಬಾಡಿ ಮುದುಡುತ್ತಿದೆ
ಉನ್ಮಾದ ತಳಕ್ಕಿಳಿಯುತ್ತಿದೆ
ಮತ್ತು ಮಾಯವಾಗುತ್ತಿದೆ
ದೇಹ ಮತ್ತೆ ಕಲ್ಲಾಗುತ್ತಿದೆ
ನನ್ನ ಮನೆ ಬಾಗಿಲಿಗೆ ಯಾರೂ ಬಂದಿಲ್ಲ
ನನ್ನ ಒಂಟಿತನ ಚೀರುತ್ತಿದೆ
ಮಳೆ ನಿಂತು ನೆಲ ಬುಸುಗುಡುತ್ತಿದೆ
ಸುತ್ತೆಲ್ಲ ಮಣ್ಣಿನ ವಾಸನೆಯಲ್ಲಿ
ನನ್ನ ಕಣಕಣವೂ ಚೀರುತ್ತದೆ
'ಸಾವೇ ನನ್ನ ಮನೆಯ ಸುತ್ತ
ಗಸ್ತು ಹೊಡೆಯುತ್ತ ತಿರುಗಬೇಡ.'

ಯಾರಾದರೂ ಬರಲಿ
ಬಂದು ನನ್ನನಪ್ಪಿಕೊಳ್ಳಲಿ
ಅಪ್ಪಿಕೊಂಡು ಮುದ್ದಾಡಲಿ
ಮುದ್ದಾಡಿ ರಮಿಸಲಿ
ರಮಿಸಿ ನನ್ನೆದೆಗೊತ್ತಿ ಹೇಳಲಿ
'ನಾನೇ ನಿನ್ನ ನಾಯಕ !'

# ಭೀತಿಯಿಂದ ಬಿಡುಗಡೆ



**ಆ್ಯಂಗ್ ಸಾನ್ ಸೂಕಿ**

ಭ್ರಷ್ಟ ಗೊಳಿಸುವುದು ಅಧಿಕಾರವಲ್ಲ, ಭೀತಿ. ಅಧಿಕಾರವನ್ನು ಕಳೆದು ಕೊಳ್ಳುವ ಭೀತಿ ಅದನ್ನು ಹೊಂದಿರುವವರನ್ನು ಭ್ರಷ್ಟ ಗೊಳಿಸಿದರೆ, ಅವರ ಭಾದೆಯ ಭೀತಿ ಅದಕ್ಕೊಳಪಟ್ಟವರನ್ನು ಭ್ರಷ್ಟಗೊಳಿಸುತ್ತದೆ. ಬಹುತೇಕ ಬರ್ಮೀಯರಿಗೆ ನಾಲ್ಕು 'ಅ-ಗತಿ' , ಅಂದರೆ ನಾಲ್ಕು ಬಗೆಯ ಭ್ರಷ್ಟತೆಗಳ ಬಗ್ಗ ಗೊತ್ತು. 'ಚಾಂದಗತಿ'–ಇದು ಮೋಹದಿಂದ ಉಂಟಾಗುವ ಭ್ರಷ್ಟತೆ. ಲಂಚ ಇಲ್ಲವೇ ತುಂಬಾ ಪ್ರೀತಿಸುವವರ ಮೇಲಿನ ಮೋಹದಿಂದ ಸರಿದಾರಿಯನ್ನು ಬಿಟ್ಟು ನಡೆಯುವುದೇ ಈ ಭ್ರಷ್ಟತೆ. 'ದೋಸಗತಿ'-ತಮಗಾಗದವರ ಮೇಲೆ ಹಗೆ ಸಾಧಿಸಲು ತಪ್ಪುದಾರಿ ಹಿಡಿಯುವುದು. 'ಲೋಗ-ಗತಿ'–ಅಭ್ಯಾಸ

---

ಐದು ವರ್ಷಗಳಿಂದ ಗೃಹಬಂಧನದಲ್ಲಿರುವ 48 ವರ್ಷ ವಯಸ್ಸಿನ ಆ್ಯಂಗ್ ಸಾನ್ ಸೂಕಿ ಎಂಬ ಅತಿ ಅಪರೂಪದ ಮಹಿಳೆ-ಬರ್ಮಾದ ನಾಯಕಿ, ಇಂದು ಬಿಡುಗಡೆ ಬಯಸುವುದಾದರೆ ತನ್ನ ದೇಶದಿಂದ ಹೊರ ಹೋಗಬೇಕು. ಇದು ಬರ್ಮಾದ ಪ್ರಸ್ತುತ ಮಿಲಿಟರಿ ಸರ್ಕಾರದ ಶರತ್ತು. 100 ಪೌಂಡು ತೂಕದ ಈ ತೆಳ್ಳಗಿನ ಹೆಂಗಸು ತಮ್ಮೆಡೆಗೆ ಗುರಿಮಾಡಿರುವ ಬಂದೂಕವೆಂಬಂತೆ ಅದು ಭಾವಿಸುತ್ತದೆ. ಸರ್ಕಾರಕ್ಕೆ ಈಕೆ ಇಷ್ಟೊಂದು ಬೆದರಿಕೆಯಾಗಲು ಕಾರಣವಾದರೂ ಏನು ?

ಬರ್ಮಾದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅತಿ ದೊಡ್ಡ ನಾಯಕ ಆ್ಯಂಗ್‌ಸಾಂಗ್‌ನ ಮಗಳು ಸೂಕಿ. ತಂದೆ ಕಗ್ಗೊಲೆಗೊಳಗಾದಾಗ ಎರಡು ವರ್ಷದವಳಾಗಿದ್ದ ಈಕೆ ತನ್ನ ಬದುಕಿನ ಬಹುಭಾಗವನ್ನು ಹೊರದೇಶಗಳಲ್ಲಿ ಕಳೆದವಳು. 1988ರಲ್ಲಿ ತನ್ನ ದೇಶಕೆ ಮರಳಿದ ಆಕೆ ಮಿಲಿಟರಿ ಸರ್ಕಾರದ ದಬ್ಬಾಳಿಕೆಯಲ್ಲಿ ನಲುಗಿ ಹೋದ ತನ್ನ ದೇಶವನ್ನು ಹತ್ತಿರದಿಂದ ಕಂಡಳು. ಆಕೆಯಿಂದ ಸುಮ್ಮನೆ ಕೂರಲಾಗಲಿಲ್ಲ. ಬಂಡೆದ್ದಿದ್ದ ವಿದ್ಯಾರ್ಥಿಗಳನ್ನು ಬೆಂಬಲಿಸುತ್ತಾ ಜನರ ದೇಶದ ರಕ್ಷಣೆಗೆ ನಿಂತಳು. ಅಹಿಂಸೆಯನ್ನೇ ಹೋರಾಟದ ಮಾರ್ಗವನ್ನಾಗಿಸಿಕೊಂಡ ಸೂಕಿಯ ಪಕ್ಷ ಪ್ರಚಂಡ ಬಹುಮತದಿಂದ ಗೆದ್ದಾಗ್ಯೂ ಮಿಲಿಟರಿ ಆಡಳಿತವು, ಸಿವಿಲಿಯನ್ ಸರ್ಕಾರಕ್ಕೆ ಅಧಿಕಾರ ವಹಿಸಿಕೊಡಲು ನಿರಾಕರಿಸಿ ಸೂಕಿಯನ್ನು ಇನ್ನೂ ಅನೇಕ ಬೆಂಬಲಿಗರನ್ನು ಬಂಧಿಸಿತು.

ಸೂಕಿ ಕಣ್ಣಿನಿಂದ ದೂರವಾಗಿರಬಹುದು, ಆದರೆ ಮನಸ್ಸುಗಳಿಂದ ಎಂದೂ ದೂರವಾಗಿಲ್ಲ. ಆಕೆಯ ಗೃಹಬಂಧನ ಆಕೆಯನ್ನು ಇನ್ನೂ ದಿಟ್ಟ ಹುತಾತ್ಮಳನ್ನಾಗಿಸಿ ಬೆಂಬಲವನ್ನು ಗಟ್ಟಿಗೊಳಿಸುತ್ತಿರುವುದು ಸರ್ಕಾರಕ್ಕೆ ಗೊತ್ತಿಲ್ಲ. ಮುಳ್ಳು ತಂತಿಗಳಿಂದ ಆವೃತ್ತವಾಗಿ ಬಂದೂಕು ಹಿಡಿದ ಸೈನಿಕರಿಂದ ಪ್ರತಿನಿಮಿಷವೂ ಕಾಯಲ್ಪಡುತ್ತಿರುವ ಮನೆಯ ಒಳಗೆ ಒಂಟಿಯಾಗಿ ಕುಳಿತ ಸೂಕಿಯನು ದೇಶದ ಏಕೈಕ ಭರವಸೆಯ ಸಂಕೇತ ಎಂದೇ ಬರ್ಮಾ ಪರಿಗಣಿಸುತ್ತಿದೆ. ತನ್ನ ತಂದೆಯ ಗೌರವಾರ್ಥ ಸೂಕಿ ಲೇಖನಗಳ ಮಾಲೆಯೊಂದನ್ನು ಪ್ರಕಟಿಸಿದ್ದಾಳೆ, 'FREFDOM FROM FEAR' ಎಂಬ ಹೆಸರಿನಲ್ಲಿ. ಇಡೀ ಪ್ರಪಂಚವೇ ಅತ್ಯಂತ ಗೌರವದಿಂದ ಪರಿಗಣಿಸುವ ಸೂಕಿ ಮತ್ತು ಆಕೆಯ ಬರಹಗಳು ಬದುಕನ್ನು-ರಾಜಕೀಯವನ್ನೂ ಸತ್ಯದ ಒರೆಗಲ್ಲಿಗೆ ಹಚ್ಚಿ ಶೋಧಿಸುವ ಸಾಮರ್ಥ್ಯವುಳ್ಳವು. 'Freedom from fear' ಎಂಬ ಶೀರ್ಷಿಕೆಯ ಈ ಲೇಖನ 'ಭೀತಿ'ಯ ಅತಿ ಸೂಕ್ಷ್ಮ ರೀತಿಗಳನ್ನು ಬಯಲಿಗೆಳೆಯುವ ಮೂಲಕ ಆತ್ಮಶೋಧನೆಗೆ ಒಡ್ಡುತ್ತದೆ, ಅನುಭವದ ಮೂಸೆಯಿಂದ ಮೂಡಿಬಂದ ಈ ಚಿಂತನೆಗಳು ಸ್ತ್ರೀವಾದೀ ಚರ್ಚೆಗಳಿಗೆ ಅತ್ಯಮೂಲ್ಯ ಕೊಡುಗೆಯಾಗಬಲ್ಲದು ಎಂಬ ಕಾರಣಕ್ಕಾಗಿ ಇದರ ಅನುವಾದ ಮಾಡಲಾಗಿದೆ.

**ವಿ. ಗಾಯತ್ರಿ**

---

ದಿಂದ ದಾರಿ ತಪ್ಪುವುದು. ಕೊನೆಯದಾಗಿ 'ಭಯ-ಗತಿ'-ಭಯವು ಎಲ್ಲ ಬಗೆಯ ವಿವೇಚನೆಯನ್ನು ನಾಶ ಮಾಡುತ್ತದೆ. ಇದು ಇತರ ಮೂರು ಭ್ರಷ್ಟತೆಗಳ ಮೂಲ ಎಂದೇ ಹೇಳ ಬಹುದು.

'ಚಾಂದ ಗತಿ' ಯಂತೆ, ತನಗಾಗಿ ಪಡೆದುಕೊಳ್ಳುವ ಅಥವಾ ತಾನು ಪ್ರೀತಿಸುವವರ ಸದ್ಭಾವನೆಯನ್ನು ಕಳೆದುಕೊಳ್ಳುವ ಭೀತಿ ಹೇಗೆ ಒಬ್ಬರಲ್ಲಿ ದುರಾಸೆಯನ್ನುಂಟು ಮಾಡುತ್ತದೆಯೋ ಅದೇ ರೀತಿಯಲ್ಲಿ ಘಾಸಿಗೊಳ್ಳುವ, ಅವಮಾನಿತಗೊಳ್ಳುವ ಭೀತಿ ಕೂಡ ದುರ್ಭಾವನೆಗೆ ಪ್ರಚೋದನೆಯನ್ನು ತರಬಲ್ಲುದು. ಮತ್ತು ಭೀತಿಯಿಂದ ಮುಕ್ತವಾದ ಸತ್ಯದ ಬೆನ್ನು ಹತ್ತದ ಹೊರತು ಅಜ್ಞಾನದಿಂದ ಬಿಡಿಸಿಕೊಳ್ಳುವುದು ಸುಲಭವಲ್ಲ, ಭೀತಿ ಮತ್ತು ಭ್ರಷ್ಟತೆಗಳ ನಡುವೆ ಇಷ್ಟೊಂದು ನಿಕಟ ಸಂಬಂಧವಿರುವಾಗ, ಭೀತಿಯಿಂದ ತುಂಬಿದ ಯಾವುದೇ ಸಮಾಜವು ಭ್ರಷ್ಟತೆಯ ಆಗರವಾಗುವುದರಲ್ಲಿ ಆಶ್ಚರ್ಯವೇನಿಲ್ಲ.

1988 ರಲ್ಲಿ ವಿದ್ಯಾರ್ಥಿಗಳ ದಂಗೆಯ ಮೂಲಕ ಸ್ಪಷ್ಟ ಪ್ರಕಟನೆ ಪಡೆದ ಬರ್ಮಾದ ಪ್ರಜಾತಂತ್ರ ಚಳವಳಿಗೆ, ದೇಶದಲ್ಲಿನ ಆರ್ಥಿಕ ಮುಗ್ಗಟ್ಟಿನ ಬಗ್ಗೆ ಜನರಲ್ಲಿ ತಲೆದೋರಿದ ಅಸಮಾಧಾನವೇ ಕಾರಣ ಎಂದು ನೋಡಲಾಗಿದೆ. ಬಹು ಕಾಲದಿಂದ ನಡೆದು ಬಂದ ಅಸಂಬದ್ಧ ಪಾಲಿಸಿಗಳು, ಹಣದುಬ್ಬರ, ಆದಾಯದಲ್ಲಿನ ಕಡಿತ ಇತ್ಯಾದಿಗಳು ದೇಶದ ಆರ್ಥಿಕತೆಯನ್ನು ವಿರೂಪಗೊಳಿಸಿದ್ದು ನಿಜ.

ಆದರೆ, 'ಮೂಲತಃ', ಒಳ್ಳೆಯ ಸ್ವಭಾವದವರೂ, ಶಾಂತಿ ಪ್ರಿಯರೂ ಆದ ಜನರ ತಾಳ್ಮೆಯನ್ನು ನುಚ್ಚು ನೂರು ಮಾಡಿದ ಕಾರ್ಪಣ್ಯಗಳಿಗಿಂತ ಹೆಚ್ಚಾಗಿ ಭ್ರಷ್ಟತೆ ಮತ್ತು ಭೀತಿಯಿಂದ ಕಳಂಕಿತಗೊಂಡ ಬದುಕಿನ ರೀತಿಯಿಂದುಂಟಾದ ಅಪಮಾನ ಅದಾಗಿತ್ತು. ವಿದ್ಯಾರ್ಥಿಗಳು ಕೇವಲ ತಮ್ಮ ಕಾಮ್ರೇಡ್‌ಗಳ ಸಾವಿನ ವಿರುದ್ಧ ಮಾತ್ರ ಪ್ರತಿಭಟಿಸುತ್ತಿರಲಿಲ್ಲ. ಬದುಕಿನ ಅರ್ಥವಂತಿಕೆಯನ್ನೇ ನಾಶ ಮಾಡುವುದರ ಮೂಲಕ ಜೀವದ ಮೇಲಿನ ಹಕ್ಕನ್ನೇ ವಂಚಿತಗೊಳಿಸಿ ಭವಿಷ್ಯತ್ತನ್ನು ಕರಾಳಗೊಳಿಸಿದ ಆಳ್ವಿಕೆಯ ವಿರುದ್ಧವೂ ಅವರ ಪ್ರತಿಭಟನೆ ಇತ್ತು. ವಿದ್ಯಾರ್ಥಿಗಳ ದಂಗೆ ಜನರ ಅಸಮಾಧಾನಗಳಿಗೆ ಸ್ಪಷ್ಟ ದನಿ ಕೊಟ್ಟಿದ್ದರಿಂದಲೇ ಅದು ಬಹು ಬೇಗ ರಾಷ್ಟ್ರೀಯ ಮಟ್ಟದ ಚಳುವಳಿಯಾಗಿ ಬೆಳೆಯಲು ಸಾಧ್ಯವಾದದ್ದು. ಇದರ ಹತ್ತಿರದ ಬೆಂಬಲಿಗರಲ್ಲಿ ಅನೇಕರು, ವ್ಯವಸ್ಥೆಯೊಳಗಡೆ ಕೇವಲ ಬದುಕು ಸಾಗಿಸುವುದು ಮಾತ್ರವಲ್ಲ ಉನ್ನತಿಯನ್ನು ಸಾಧಿಸುತ್ತಾ ಹೋಗುವ ಚಾಲಾಕಿತನವನ್ನು ಹೊಂದಿದ್ದ ಉದ್ದಿಮೆದಾರರು. ಆದರೆ ಅವರ ಸಂಪದ್ಭರಿತ ಸ್ಥಿತಿಯು ಅವರಿಗೆ ನಿಜಾರ್ಥದಲ್ಲಿ ಯಾವ ಭದ್ರತೆಯನ್ನಾಗಲೀ, ತೃಪ್ತಿಯನ್ನಾಗಲೀ ತಂದು ಕೊಡಲಿಲ್ಲ. ಮತ್ತು ಸಹ ಪ್ರಜೆಗಳು,' ಅವರು ಯಾವುದೇ ಆರ್ಥಿಕ ಹಿನ್ನಲೆಯನ್ನು ಹೊಂದಿರಲಿ. ಒಂದು ಘನತೆಯ ಬದುಕನ್ನು ಹೊಂದ ಬೇಕಾದರೆ ಕೊನೇಪಕ್ಷ ಒಂದು ಬದ್ಧ ಆಡಳಿತ ವ್ಯವಸ್ಥೆ ಅವಶ್ಯ ಎಂಬುದನ್ನು ಅವರು ಮನಗಾಣಲು ಸಾಧ್ಯವಾಯಿತು.

ಬರ್ಮಾದ ಜನ ಜಡ ದಬ್ಬಾಳಿಕೆಯಿಂದ ಕ್ಷೋಭೆಗೊಂಡ ಸ್ಥಿತಿಯ ಬಗ್ಗೆ ಸಂಪೂರ್ಣ ದಣಿದಿದ್ದರು. ಅಧಿಕಾರವೆಂಬ ಬೊಗಸೆಯೊಳಗಿನ ನೀರಿನಂತಿದ್ದರು ಅವರು

ಬೊಗಸೆಯೊಳಗಿನ ನೀರಿನಂತೆ
ಸ್ವಚ್ಛ ತಣ್ಣಗಿರಬಹುದು ನಾವು
ಆದರೆ ಅದೇ ಬೊಗಸೆ ನೀರಿನೊಳಗೆ
ಗಾಜಿನ ಸಿಬುರುಗಳಂತಿರಬಹುದು ನಾವು

ಹಿಸುಕಲು ಹವಣಿಸುವ ಕೈಗಳಿಂದ ತಮ್ಮನ್ನು ಕಾಪಾಡಿಕೊಳ್ಳುವ ಅತ್ಯಂತ ಸಣ್ಣ ಆದರೆ ಮೊನಚಿನಿಂದ ಪ್ರಜ್ವಲಿಸುವ ಗಾಜಿನ ಚೂರುಗಳು, ದಬ್ಬಾಳಿಕೆಯಿಂದ ಬಿಡುಗಡೆ ಪಡೆಯಲು ಹವಣಿಸುವವರ ದಿಟ್ಟತನದ ಸ್ಪಷ್ಟ ಸಂಕೇತವಾಗಬಹುದು. ಬಾಗ್‌ಯೋಕ್ ಆ್ಯಂಗ್ ಸ್ಯಾನರು ತನ್ನನ್ನು ಒಬ್ಬ ಕ್ರಾಂತಿಕಾರಿ ಎಂದು ಕರೆದುಕೊಂಡರು ಮತ್ತು ತನ್ನನ್ನು ವಿಚಾರಣೆಗೊಳಪಡಿಸಿದ್ದ ಸಂದರ್ಭದಲ್ಲಿ ಬರ್ಮಾವನ್ನು ಅಮರಿಕೊಂಡಿದ್ದ ಸಮಸ್ಯೆಗಳಿಗೆ ಪರಿಹಾರ ಹುಡುಕುವಲ್ಲಿ ನಿರಂತರವಾಗಿ ತೊಡಗಿಕೊಂಡಿದ್ದರು. ಆತ ಯಾವಾಗಲೂ ಜನರನ್ನು ತಮ್ಮೊಳಗಡೆ ದಿಟ್ಟತನವನ್ನು ಬೆಳೆಸಿಕೊಳ್ಳಲು ಹುರಿದುಂಬಿಸುತ್ತಿದ್ದರು:

"ಯಾವಾಗಲೂ ಇತರರ ಧೈರ್ಯ ಮತ್ತು ಗುಂಡಿಗೆಗಳನ್ನೇ ಅವಲಂಬಿಸಬೇಡಿ. ನಿಮ್ಮಲ್ಲಿ ಪ್ರತಿಯೊಬ್ಬರೂ ಧೈರ್ಯ, ಗುಂಡಿಗೆಗಳನ್ನು ಹೊಂದಿ ನಾಯಕರಾಗಲು ತ್ಯಾಗಗಳನ್ನು ಮಾಡಬೇಕು. ಹೀಗಾದಾಗಲೇ ನಾವೆಲ್ಲರೂ ಒಟ್ಟಿಗೆ ನಿಜ ವಿಮುಕ್ತಿಯನ್ನು ಪಡೆಯಲು ಸಾಧ್ಯ. ಭೀತಿಯು ದಿನನಿತ್ಯ ಬದುಕಿನ ಅವಿಭಾಜ್ಯ ಭಾಗವಾಗಿರುವ ಪರಿಸರದಲ್ಲಿ ಭ್ರಷ್ಟರಾಗದೇ ಉಳಿಯುವ ಪ್ರಯತ್ನ ಅವಶ್ಯಕ ಎಂಬುದು, ಶಾಸನಬದ್ಧ ಆಡಳಿತ ಹೊಂದಿರುವ ದೇಶಗಳಲ್ಲಿರುವಷ್ಟು ಅದೃಷ್ಟವಂತರಾದವರಿಗೆ ತಕ್ಷಣದ ಸಮಸ್ಯೆಯಲ್ಲ. ನಿಷ್ಪಕ್ಷಪಾತ ಶಿಕ್ಷೆ ವಿಧಿಸುವ ಮೂಲಕ

ಶಾಸನಗಳು ಭ್ರಷ್ಟತೆಯನ್ನು ತಡೆಗಟ್ಟಲು ಸಾಧ್ಯವಾಗುವುದು ಮಾತ್ರವಲ್ಲ, ಜನರು ಭ್ರಷ್ಟ ಆಚರಣೆಗಳಿಗೆ ಒಳಗಾಗದೆ ತಮ್ಮ ಮಾನವ ಸಹಜ ಘನತೆಯನ್ನು ಕಾಪಾಡಿಕೊಳ್ಳಲು ಬೇಕಾದ ಮೂಲಭೂತ ಅವಶ್ಯಕತೆಗಳನ್ನು ಹೊಂದಲೂ ಇದರಿಂದ ಸಹಾಯವಾಗುತ್ತದೆ. ಅಂತಹ ಶಾಸನಗಳು ಇಲ್ಲದಿದ್ದಾಗ ನ್ಯಾಯ ಮತ್ತು ಸಾಮಾನ್ಯ ಘನತೆಯ ನೀತಿಯನ್ನು ಎತ್ತಿಹಿಡಿಯುವ ಹೊರೆಯು ಜನ ಸಾಮಾನ್ಯರ ಮೇಲೆ ಬೀಳುತ್ತದೆ. ಅವರ ಸತತ ಪ್ರಯತ್ನದ ಒಟ್ಟಾದ ಪರಿಣಾಮ ಮತ್ತು ನಿರಂತರವಾಗಿ ಕಾಯ್ದುಕೊಂಡ ಅಂತಃಶಕ್ತಿಗಳು, ಯುಕ್ತಿ ಮತ್ತು ಪ್ರಜ್ಞೆಗಳನ್ನು ಭೀತಿ ಆವರಿಕೊಂಡಿರುವ ಸ್ಥಿತಿಯನ್ನು ಬದಲಿಸಿ, ಜನ ಬಯಸುವ ಸಾಮರಸ್ಯ ಮತ್ತು ನ್ಯಾಯಗಳಿಗೆ ಕುಮ್ಮಕ್ಕು ಕೊಟ್ಟು, ವಿಚ್ಛಿದ್ರಕಾರಕ ರೀತಿ-ನೀತಿಗಳನ್ನು ನಿಯಂತ್ರಿಸುವ ಶಾಸನಬದ್ಧ ನಿಯಮಗಳು ಇರುವ ಸ್ಥಿತಿಯನ್ನು ತರಲು ಸಾಧ್ಯ.

ಶಕ್ತಿವಂತ ಮತ್ತು ಅನೀತಿವಂತ ಜನ ದುರ್ಬಲ ಮತ್ತು ಅಸಹಾಯಕರ ಮೇಲೆ ಪ್ರಾಬಲ್ಯ ಸಾಧಿಸಲು ಉಪಯೋಗಿಸಲ್ಪಡುವ ಮಾರಕ ಅಸ್ತ್ರಗಳನ್ನು ಸೃಷ್ಟಿಸುತ್ತಿರುವ ತಾಂತ್ರಿಕತೆಯ ಯುಗದಲ್ಲಿ, ರಾಜಕೀಯ ಮತ್ತು ನೀತಿಗಳ ನಡುವೆ ನಿಕಟತೆ ಉಂಟಾಗಬೇಕಾದ ತೀವ್ರ ಅವಶ್ಯಕತೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟಗಳೆರಡರಲ್ಲೂ ಇದೆ.

ಸಂಯುಕ್ತ ರಾಷ್ಟ್ರಗಳ ಮಾನವ ಹಕ್ಕುಗಳನ್ನು ಕುರಿತ ವಿಶ್ವಾತ್ಮಕ ಘೋಷಣೆಯು, ಪ್ರತಿಯೊಬ್ಬ ಮಾನವರೂ, ಯಾವುದೇ ವರ್ಣ, ರಾಷ್ಟ್ರೀಯತೆ ಅಥವಾ ಧರ್ಮದ ಭೇದವಿಲ್ಲದೆ ಹೊಂದಲರ್ಹರಾಗಿರುವ ಮೂಲಭೂತ ಹಕ್ಕು ಮತ್ತು ಬಿಡುಗಡೆಗಳನ್ನು ತರಲು ಸಮಾಜದ ಪ್ರತಿಯೊಬ್ಬ ವ್ಯಕ್ತಿ ಮತ್ತು ಅಂಗಗಳು ಸರ್ವದಾ ಪ್ರಯತ್ನಿಸಬೇಕಾಗಿರುವುದನ್ನು ಒತ್ತಿ ಹೇಳುತ್ತದೆ. ಆದರೆ ಜನರ ಆಯ್ಕೆಯ ಬದಲು ದಬ್ಬಾಳಿಕೆಯನ್ನು ಹೊಂದಿರುವ ಸರ್ಕಾರ ಇರುವವರೆಗೂ ಮತ್ತು ದೀರ್ಘಕಾಲಿಕ ಶಾಂತಿ ಮತ್ತು ಸಮೃದ್ಧತೆಗೆ ಬದಲಾಗಿ ಅಲ್ಪಕಾಲಿಕ ಲಾಭಗಳನ್ನು ದೃಷ್ಟಿಯಾಗಿಯುಳ್ಳ ಆಸಕ್ತ ಗುಂಪುಗಳು ಇರುವವರೆಗೂ ಮಾನವ ಹಕ್ಕುಗಳನ್ನು ಪ್ರತಿಪಾದಿಸುವ ಮತ್ತು ರಕ್ಷಿಸುವ ಒಟ್ಟಾದ ಅಂತರರಾಷ್ಟ್ರೀಯ ಕ್ರಿಯೆಗಳು ಎಷ್ಟೇ ಹೆಚ್ಚೆಂದರೂ ಭಾಗಶಃ ಮನ್ನಣೆ ಕಂಡ ಹೋರಾಟಗಳಾಗಿ ಮಾತ್ರ ಉಳಿಯುತ್ತವೆ. ದಬ್ಬಾಳಿಕೆಗೆ ಒಳಗಾದ ಸಂತ್ರಸ್ತರು ಮಾನವ ಕುಲದ ಕುಟುಂಬದ ಸದಸ್ಯರಾಗಿ ತಮ್ಮ ಜನ್ಮಸಿದ್ಧ ಹಕ್ಕುಗಳನ್ನು ಸಮರ್ಥಿಸಿಕೊಳ್ಳಲು ತಮ್ಮೊಳಗಿನ ಸಂಪನ್ಮೂಲಗಳನ್ನು ಆವಾಹನೆ ಮಾಡಿಕೊಳ್ಳುವ ರೀತಿಯ ಹೋರಾಟದ ವಿವಿಧ ಸ್ವರೂಪಗಳು, ಹಕ್ಕುಗಳು ಮುಂದುವರೆಯುತ್ತಲೇ ಹೋಗುತ್ತದೆ.

ಒಂದು ಶುದ್ಧವಾದ ಕ್ರಾಂತಿಯು, ದೇಶದ ಅಭಿವೃದ್ಧಿಯ ಸ್ವರೂಪವನ್ನು ಬದಲಾಯಿಸಬಲ್ಲ ಮಾನಸಿಕ ದೃಷ್ಟಿಕೋನ ಮತ್ತು ಮೌಲ್ಯಗಳಲ್ಲಿನ ಬದಲಾವಣೆಯ ಅವಶ್ಯಕತೆಯನ್ನು ಮನಗಂಡ ಬೌದ್ಧಿಕ ದೃಢ ನಿಶ್ಚಯದಿಂದ ಹುಟ್ಟಿದ ಚೇತನವಾಗಿರುತ್ತದೆ.

ಕೇವಲ ವಸ್ತುಸಂಬಂಧೀ ಸ್ಥಿತಿಗತಿಗಳಲ್ಲಿನ ಸುಧಾರಣೆಗಾಗಿಯೇ ಅಧಿಕೃತ ಪಾಲಿಸಿ ಮತ್ತುಸಂಸ್ಥೆಗಳಲ್ಲಿಬದಲಾವಣೆಯನ್ನು ತರಬೇಕೆನ್ನುವುದನ್ನೇ ಗುರಿಯಾಗಿಟ್ಟುಕೊಂಡ ನಿರ್ಣಯಕ್ಕೆ ನಿಜವಾದ ಯಶಸ್ಸಿನ ಸಾಧ್ಯತೆಗಳಿರುವುದು ತುಂಬಾ ಕಮ್ಮಿ. ಅಂತಃಕಾರಣಿಕ ಕ್ರಾಂತಿಯಾಗಿದ್ದಲ್ಲದೆ, ಹಳೆಯ ಮಾದರಿಯ ದುಷ್ಕೃತ್ಯಗಳನ್ನು ಹುಟ್ಟುಹಾಕಿರುವ ಶಕ್ತಿಗಳು ಚಲನೆಯಲ್ಲಿರುತ್ತಲೇ ಹೋಗುತ್ತಾ, ಸುಧಾರಣೆ ಮತ್ತು ಪುನರ್‌ಸೃಷ್ಟಿಯ ಪ್ರಕ್ರಿಯೆಗೆ ನಿರಂತರ ಬೆದರಿಕೆಯನ್ನು ಒಡ್ಡುತ್ತಲೇ ಹೋಗುತ್ತದೆ. ಕೇವಲ ಪ್ರಜಾತಂತ್ರ ವಿಮುಕ್ತಿ ಮತ್ತು ಮಾನವ ಹಕ್ಕುಗಳಿಗಾಗಿ ಕರೆ ನೀಡಿದರೆ ಮಾತ್ರ ಸಾಲದು, ಹೋರಾಟವನ್ನು ಉಳಿಸಿಕೊಂಡು ಹೋಗುವ ಒಟ್ಟಾದ ದೃಢ ಸಂಕಲ್ಪ, ಸತ್ಯಾನ್ವೇಷಣೆಯಲ್ಲಿ ತ್ಯಾಗಗಳನ್ನು ಮಾಡುವುದು, ಅತ್ಯಾಶೆ, ಕುಟಿಲತೆ, ಅಜ್ಞಾನ ಮತ್ತು ಭೀತಿಗಳನ್ನು ಹುಟ್ಟುಹಾಕಬಲ್ಲ ಭ್ರಷ್ಟಾತ್ಮಕ ಪ್ರಭಾವಗಳನ್ನು ಮೆಟ್ಟಿ ನಿಲ್ಲುವುದೂ ಮುಖ್ಯವಾಗುತ್ತದೆ.

ಪ್ರಯತ್ನವನ್ನು ಮುಂದುವರೆಸುತ್ತಲೇ ಹೋಗುವ ಸಂತರನ್ನು ಪಾಪಾತ್ಮರು ಎಂದು ಹೇಳಲಾಗಿದೆ. ಆದ್ದರಿಂದ ಪ್ರಯತ್ನಿಸುತ್ತಲೇ ಹೋಗುವ, ಮತ್ತು ಆ ಪ್ರಕ್ರಿಯೆಯಲ್ಲಿ ಜವಾಬ್ದಾರಿಗಳನ್ನು ಹೊತ್ತುಕೊಳ್ಳಲು ಮತ್ತು ಮುಕ್ತ ಸಮಾಜವನ್ನು ಕಾಪಾಡಿಕೊಂಡು ಹೋಗುವ ನೀತಿ-ನಿಷ್ಠೆಗಳನ್ನು ಎತ್ತಿ ಹಿಡಿಯಲು ತಮ್ಮನ್ನು ಶಕ್ತರನ್ನಾಗಿಸಿಕೊಳ್ಳುವ ಮುಕ್ತ ಜೀವಿಗಳನ್ನು ದಮನಿಸಲಾಗಿದೆ. ತಮ್ಮ ತುಂಬು ಬದುಕಿಗೆ ಮಾನವರು ಆಶಿಸುವ

ಮೂಲಭೂತ ವಿಮುಕ್ತಿಗಳಲ್ಲಿ ಭೀತಿಯಿಂದ ದೊರೆಯುವ ವಿಮುಕ್ತಿಯು ಸಾಧನ ಮತ್ತು ಕೊನೆ ಎರಡೂ ಆಗುತ್ತದೆ. ರಾಜ್ಯಾಂಗದ ಅಧಿಕಾರ ಮತ್ತು ದಬ್ಬಾಳಿಕೆಗಳ ವಿರುದ್ಧದ ಶಕ್ತಿಯುತ, ಪ್ರಜಾ ತಾಂತ್ರಿಕ ಸಂಸ್ಥೆಗಳನ್ನು ಕಟ್ಟ ಬಯಸುವ ಜನರು ಮೊಟ್ಟ ಮೊದಲಿಗೆ ತಮ್ಮ ಮನಸ್ಸುಗಳನ್ನು ಭೀತಿ ಮತ್ತು ಔದಾಸೀನ್ಯಗಳಿಂದ ವಿಮುಕ್ತಿಗೊಳಿಸುವುದನ್ನು ಕಲಿಯಬೇಕು.

ತಾನು ಭೋಧಿಸಿದ್ದನ್ನೇ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಆ್ಯಂಗ್ ಸ್ಯಾನ್, ಯಾವತ್ತೂ ತಮ್ಮ ಧೈರ್ಯವನ್ನು ಮೆರೆದವರು. ಈ ಧೈರ್ಯ ಕೇವಲ ಭೌತಿಕ ಸ್ವರೂಪದಲ್ಲ. ಸತ್ಯವನ್ನು ಮಾತನಾಡುವ, ಹೇಳಿದಂತೆ ನಡೆಯುವ, ಟೀಕೆಗಳನ್ನು ಸ್ವೀಕರಿಸುವ, ತತ್ವಗಳನ್ನು ಒಪ್ಪಿಕೊಂಡು ಸರಿಪಡಿಸಿಕೊಳ್ಳುವ, ಎದುರಾಳಿಗಳನ್ನು ಗೌರವಿಸುವ, ಶತ್ರುಗಳೊಂದಿಗೆ ಚರ್ಚಿಸುವ ಮತ್ತು ತನ್ನ ನಾಯಕತ್ವದ ಒಳಿತು–ಕೆಡುಕುಗಳ ತೀರ್ಮಾನವನ್ನು ಜನರಿಗೇ ಬಿಡುವ ಧೈರ್ಯ ಅದು. ಅತನ ಇಂತಹ ನೈತಿಕ ಧೈರ್ಯವನ್ನೇ ಬರ್ಮ ಯಾವಾಗಲೂ ಪ್ರೀತಿಸುವುದು ಮತ್ತು ಗೌರವಿಸುವುದು. ಈ ಕೀರ್ತಿ-ಗೌರವಗಳು ಕೇವಲ ಯೋಧನಾಗಿ ಮಾತ್ರವಲ್ಲ ದೇಶದ ಸ್ಫೂರ್ತಿ ಮತ್ತು ಪ್ರಜ್ಞೆಯಾಗಿ. ಮಹಾತ್ಮ ಗಾಂಧಿಯವರನ್ನು ಜವಾಹರಲಾಲ ನೆಹರೂರವರು ವರ್ಣಿಸಿದ ಈ ರೀತಿ ಆ್ಯಂಗ್ ಸ್ಯಾನ್‌ರಿಗೆ ತುಂಬಾ ಒಪ್ಪುತ್ತದೆ. "ಆತನ ಭೋಧನೆಯ ಸಾರವೇ ನಿರ್ಭೀತಿ ಮತ್ತು ಸತ್ಯವಾಗಿದ್ದು ಜನರ ಕಲ್ಯಾಣವನ್ನು ಯಾವಾಗಲೂ ಮನಸ್ಸಿನಲ್ಲಿಟ್ಟು ಕೊಂಡೇ ಇರುವ ಆತನ ಕ್ರಿಯೆಗಳು ಇವುಗಳಿಂದಲೇ ಕಡೆಯಲ್ಪಟ್ಟವು"

ಅಹಿಂಸೆಯ ಅತಿ ಶ್ರೇಷ್ಠ ದೃಷ್ಟಾರನಾದ ಗಾಂಧಿ ಮತ್ತು ನ್ಯಾಷನಲ್ ಆರ್ಮಿಯ ಸ್ಥಾಪಕನಾದ ಆ್ಯಂಗ್‌ಸಾನ್ ಇಬ್ಬರೂ ಸಂಪೂರ್ಣ ಭಿನ್ನ ವ್ಯಕ್ತಿತ್ವಗಳಾಗಿದ್ದರು. ಆದರೆ ಯಾವುದೇ ಸಂದರ್ಭದಲ್ಲಿ ಯಾವುದೇ ಸ್ಥಳದಲ್ಲಿ ಪ್ರಭುತ್ವದ ಸ್ವರೂಪ ಮತ್ತು ಸವಾಲುಗಳು ಅನಿವಾರ್ಯವಾಗಿ ಒಂದೇ ಆಗಿರುವುದರಿಂದ, ಸವಾಲನ್ನು ಎದುರಿಸಲು ಎದ್ದು ನಿಲ್ಲುವವರ ಸ್ವಾಭಾವಿಕ ಗುಣಗಳು ಒಂದೇ ಆಗಿರುತ್ತದೆ. ಭಾರತದ ಜನರಲ್ಲಿ ದಿಟ್ಟತನವನ್ನು ತುಂಬಿದ್ದು ಗಾಂಧೀಜಿ ಅತಿ ದೊಡ್ಡ ಸಾಧನೆಗಳಲ್ಲಿ ಒಂದೆಂದು ಪರಿಗಣಿಸುವ ನೆಹರೂ ಒಬ್ಬ ರಾಜಕೀಯ ಆಧುನೀಕರಾಗಿದ್ದರು. ಆದರೆ ಆತ ಇಪ್ಪತ್ತನೇ ಶತಮಾನದ ಸ್ವತಂತ್ರ ಚಳುವಳಿಯನ್ನು ವಿಶ್ಲೇಷಿಸುವಾಗ, ಪ್ರಾಚೀನ ಭಾರತದ ತತ್ವಗಳೆಡೆಗೆ ದೃಷ್ಟಿ ಹಾಯಿಸಿದ್ದರು. "ಒಂದು ದೇಶ ಅಥವಾ ವ್ಯಕ್ತಿಗೆಯಿರುವ ಅತಿ ದೊಡ್ಡ ಕೊಡುಗೆ ಯೆಂದರೆ ಅಭಯ, ಇದು ಕೇವಲ ಭೌತಿಕತೆಗೆ ಸಂಬಂಧಿಸಿದ ಅಭಯವಲ್ಲ. ಇದು ನಿರ್ಭೀತಿಯ ಮನಸ್ಥಿತಿ."

ನಿರ್ಭೀತಿಯು ಒಂದು ಕೊಡುಗೆಯಿರಬಹುದು, ಆದರೆ ಇದಕ್ಕಿಂತ ಮುಖ್ಯವಾದುದೆಂದರೆ ನಿರಂತರ ಪ್ರಯತ್ನದಿಂದ ಪಡಕೊಂಡ ಧೈರ್ಯ–ನಮ್ಮ ಕ್ರಿಯೆಗಳನ್ನು ಭೀತಿ ನಿಯಂತ್ರಿಸಲು ಬಿಡದೇ ಇರುವುದು. ಒತ್ತಡದ ಸನ್ನಿವೇಶದಲ್ಲಿ ಇರುವ ಗಾಂಭೀರ್ಯ ಎಂದು ವರ್ಣಿಸಬಹುದಾದ ಧೈರ್ಯ. ನಿರಂತರ ತೀವ್ರ ಒತ್ತಡಕ್ಕೆ ಪ್ರತಿಯಾಗಿ ಅರಳುತ್ತಲೇ ಹೋಗುವ ಗಾಂಭೀರ್ಯ/ಮನೋಹರತೆ.

ಮೂಲಭೂತ ಮಾನವ ಹಕ್ಕುಗಳನ್ನು ವಂಚಿತಗೊಳಿಸುವ ವ್ಯವಸ್ಥೆಯೊಳಗೆ, ಭೀತಿಯು ದಿನ ನಿತ್ಯ ಬದುಕಿನ ರೀತಿಯಾಗಿರುತ್ತದೆ. ಜೈಲು ಬಂಧಿಗಳಾಗುವ ಭಯ, ಹಿಂಸೆಗೊಳಪಡುವ ಭಯ, ಸಾವಿನ ಭಯ, ಸ್ನೇಹಿತರನ್ನು, ಕುಟುಂಬವನ್ನು, ಆಸ್ತಿ ಇಲ್ಲವೇ ಬದುಕಿನ ಸಾಧನೆಗಳನ್ನು ಕಳಕೊಳ್ಳುವ ಭಯ, ಬಡತನದ ಭಯ, ಪರಕೀಯಗೊಳ್ಳುವ ಭಯ, ಸೋಲಿನ ಭಯ. ಅಗೋಚರವಾಗಿದ್ದುಕೊಂಡು ಅತ್ಯಂತ ಅಪಾಯಕಾರಿಯಾಗಿರುವ ಭೀತಿಯ ಸ್ವರೂಪವೆಂದರೆ, ಅದು ಸಾಮಾನ್ಯ ತಿಳುವಳಿಕೆ-ಇನ್ನೂ ಮುಂದುವರೆದು ವಿವೇಕದ ಮುಸುಕು ಹಾಕಿಕೊಂಡು ಬರುವುದು. ಇದು ಜನರ ಆತ್ಮಗೌರವ, ಮತ್ತು ಘನತೆಗಳನ್ನು ಕಾಪಾಡಿಕೊಳ್ಳಲು ಸಾಧ್ಯವಾಗುವ ದಿನನಿತ್ಯದ ಕೆಲವು ಧೈರ್ಯವಂತ ಕ್ರಿಯೆಗಳನ್ನು ನಿರರ್ಥಕವಾಗಿಸಿ ಬಿಡುತ್ತದೆ. ಭೀತಿಯ ಸೋಂಕು ಹಿಡಿದು ಹೋದ ಜನರಿಗೆ ಅದರಿಂದ ಬಿಡಿಸಿಕೊಳ್ಳುವುದು ಅಷ್ಟು ಸುಲಭವಲ್ಲ. ಅದರೂ, ತೀವ್ರ ದಮನಕಾರಿಯಾದ ಪ್ರಭುತ್ವದಡಿಯಲ್ಲಿಯೇ ದಿಟ್ಟತನವು ಪದೇ ಪದೇ ತಲೆ ಎತ್ತುತ್ತದೆ. ಏಕೆಂದರೆ ಭೀತಿಯು ನಾಗರೀಕ ಮಾನವರ ಸಹಜ ಸ್ಥಿತಿ ಅಲ್ಲವೇ ಅಲ್ಲ.

ಲಂಗು ಲಗಾಮಿಲ್ಲದ ಅಧಿಕಾರದ ಎದುರು ಹುಟ್ಟಿ ಬರುವ ದಿಟ್ಟತನವು ನೀತಿ-ನೇಮಗಳ ಘನತೆಯ ಬಗ್ಗೆ ಇರುವ ದೃಢ ನಂಬಿಕೆಯೇ ಆಗಿದೆ. ಚರಿತ್ರೆಯ ಸತ್ಯದೊಂದಿಗೆ ಬೆಸಕೊಂಡ ಇದು ಎಲ್ಲ ಅಡೆತಡೆಗಳ

ನಡುವೆಯೂ ಮಾನವರನ್ನು ಆಧ್ಯಾತ್ಮಿಕ ಮತ್ತು ವಸ್ತು ಸಂಬಂಧೀ ಉನ್ನತಿಯೆಡೆಗೆ ಕರೆದೊಯ್ಯುತ್ತದೆ. ಮಾನವರ ಈ ಸ್ವಯಂ ಸುಧಾರಣೆ ಮತ್ತು ಸ್ವಯಂ ವಿಮೋಚನೆಯ ಸಾಮರ್ಥ್ಯವೇ ಅವರನ್ನು ಪಶುಗಳಿಗಿಂತ ಭಿನ್ನರಾಗಿಸುವುದು. ಅಖಂಡತೆಯ ಕಲ್ಪನೆ, ಅದನ್ನು ಸಾಧಿಸುವ ಛಲ, ಅದರೆಡೆಗೆ ಹಾದಿ ಹುಡುಕಿಕೊಳ್ಳುವ ಬುದ್ಧಿವಂತಿಕೆ, ಮತ್ತು ಆ ಹಾದಿಯಲ್ಲಿ ನಡೆಯುವ ಸಂಕಲ್ಪ-ಕೊನೆಯವರೆಗೆ ಅಲ್ಲದೇಹೋದರೂ ಕೊನೇ ಪಕ್ಷ ವ್ಯಕ್ತಿಗತ ಮಿತಿಗಳಿಂದ ಮತ್ತು ಸುತ್ತಲಿನ ಅಡ್ಡಿ ಆತಂಕ ಗಳಿಂದ ಮೇಲೇರುವ ಸಂಕಲ್ಪ ಇವೆಲ್ಲಾ ಮಾನವ ಜವಾಬ್ದಾರಿಯ ಮೂಲದಲ್ಲಿಯೇ ಇವೆ. ವೈಚಾರಿಕ, ನಾಗರೀಕ ಮಾನವತೆಯನ್ನು ಹೊಂದಿರುವ ವಿಶ್ವ, ಮಾನವರ ದೃಷ್ಟಿ-ಕನಸುಗಳಾಗಿವೆ. ಇದೇ ದೃಷ್ಟಿ ಕನಸುಗಳೇ ಅವರನ್ನು ಭೀತಿ, ಲೋಭಗಳಿಂದ ಮುಕ್ತವಾದ ಸಮಾಜಗಳನ್ನು ಕಟ್ಟುವ ಕೆಲಸಕ್ಕೆ ಕೈಹಾಕುವ ಧೈರ್ಯವನ್ನು ತುಂಬುವುದು. ಸತ್ಯ, ನ್ಯಾಯ ಮತ್ತು ದಯೆ-ಕರುಣೆ ಇತ್ಯಾದಿ ಪರಿಕಲ್ಪನೆಗಳೇ ಕ್ರೂರ ಅಧಿಕಾರದ ವಿರುದ್ಧ ನಿಲ್ಲಬಲ್ಲ ರಕ್ಷಕ ಶಕ್ತಿಗಳಾಗಿರುವಾಗ ಇವುಗಳನ್ನು ಕ್ಲೀಷೆಯೆಂದು ತಳ್ಳಿಹಾಕಲು ಸಾಧ್ಯವೇ ಇಲ್ಲ.

ಕಳೆದ ಸಂಚಿಕೆಯಲ್ಲಿ '**ಆನಂದಬಾಯೀ-ಒಂದು ಸ್ಮರಣೆ**' ಈ ಲೇಖನ ಬರೆದವರು ಎಚ್. ಎಸ್. ಉಷಾರಾಣಿ. ಮುದ್ರಣದಲ್ಲಿ ಎಚ್. ಎಸ್. ಸುಜಾತ ಎಂದು ಇದ್ದು-ಈ ದೋಷಕ್ಕಾಗಿ ವಿಷಾದಿಸುತ್ತೇವೆ.

**ಸಂಪಾದಕೀಯ ಮಂಡಳಿ**

## ಇಕೋ ಸ್ತ್ರೀವಾದವನ್ನು ಕುರಿತಂತೆ ಓದಬೇಕಾದ ಎರಡು ಮುಖ್ಯ ಪುಸ್ತಕಗಳು

1. THE DEATH OF NATURE : Women, Ecology and Scientific revolution

ಲೇಖಕಿ : **ಕ್ಯಾರೋಲಿನ್ ಮರ್ಚೆಂಟ್**
ಹಾರ್ಪರ್ ಅಂಡ್ ರೋ
ನ್ಯೂಯಾರ್ಕ್, 1980

ಈ ಪುಸ್ತಕವಲ್ಲಿ ಕ್ಯಾರೋಲಿನ್ ಮರ್ಚೆಂಟ್ ಅವರು, 16 ಮತ್ತು 17 ನೇ ಶತಮಾನಗಳಲ್ಲಿ ಯೂರೋಪಿನಲ್ಲಿ ಬೆಳೆದುಬಂದ ಪರಿಸರದ ಶೋಷಣೆ, ವ್ಯಾಪಾರೀಕರಣದ ವಿಸ್ತರಣೆ ಮತ್ತು ಈ ಪ್ರಕ್ರಿಯೆಯಲ್ಲಿ ಮತ್ತೂ ಬಲ ಗೊಂಡ ಮಹಿಳೆಯರ ದಾಸ್ಯ ಇವುಗಳ ನಡುವಿನ ಚಾರಿತ್ರಿಕ ಅಂಶಗಳ ಸಂಬಂಧಗಳನ್ನು- ಆಮೂಲಾಗ್ರವಾಗಿ ಅಭ್ಯಸಿ ಸಿದ್ದಾರೆ. ಜೀವ ತುಂಬುವ ತಾಯಿಯ ರೀತಿಯಲ್ಲಿ ನೋಡಲ್ಪಟ್ಟ ಪ್ರಕೃತಿಯ ಜೈವಿಕ ಮಾದರಿಯು ಯಾಂತ್ರೀಕೃತ ಮಾದರಿಯೊಂದರಿಂದ ಹೇಗೆ ಪಲ್ಲಟಗೊಳ್ಳ ಲ್ಪಟ್ಟಿತು ಮತ್ತು ಇದು ಹೇಗೆ ಪ್ರಕೃತಿಯನ್ನು ಜಢ, ನಿರ್ಜೀವ, ಕೇವಲ ಬಳಕೆಗಷ್ಟೇ ಲಾಯಕ್ಕಾದದ್ದು ಎಂಬ ಧೋರಣೆಯನ್ನು ಹುಟ್ಟುಹಾಕಿತು ಎಂಬುದನ್ನು ವಿವರಿಸು ತ್ತಾರೆ.

ಸಂಸ್ಕೃತಿ ಮತ್ತು ಪ್ರಗತಿಯ ಹೆಸರಿನಲ್ಲಿ ಬೆಳೆಯು ತ್ತಿರುವ ವ್ಯಾಪಾರೀಕೃತವರ್ಗದ ಆಸಕ್ತಿಗಾಗಿ ಪ್ರಕೃತಿ ಮತ್ತು ಮಹಿಳೆಯರು ಅಪಮೌಲ್ಯಗೊಂಡರು, ಶೋಷಿಸ ಲ್ಪಟ್ಟರು. ವೈಚಾರಿಕ "ಪುರುಷ" ಅತಿ ಶ್ರೇಷ್ಠನಾದನು. ಮಹಿಳೆಯರು ವಸ್ತುನಿಷ್ಠ ದೃಷ್ಟಿಕೋನ ಹೊಂದಲು ಅನರ್ಹರು ಎಂಬಂತೆ ನೋಡಲಾಯಿತು. ಅವರ ಕೆಲಸ ಏನಿದ್ದರೂ ಪುರುಷರ ಒಳಿತಿಗಾಗಿ ಕಾರ್ಯ ನಿರ್ವಹಿಸು ವುದಷ್ಟೆ. ಈ ಬಗೆಯ ಮನೆ ಮಡದೀಕರಣವನ್ನು ಮತ್ತು ಸಾರ್ವಜನಿಕ ಬದುಕಿನಿಂದ ದೂರೀಕರಣವನ್ನು ಪ್ರತಿಭಟಿಸಿದ ಮಹಿಳೆಯರನ್ನು ನಿಯಂತ್ರಿಸಬೇಕೆಂಬುದು ಧೋರಣೆ ಯಾಯಿತು. ಇದರ ಒಂದು ಜ್ವಲಂತ ಉದಾಹರಣೆಗೆ witch hunting ಈ ಎಲ್ಲಾ ಅಂಶಗಳು ಅಂದಿನ enlightment ಯುಗದಷ್ಟೇ ಅಥವಾ ಅದಕ್ಕಿಂತ ಹೆಚ್ಚು ಇಂದು ಪ್ರಸ್ತುತವಾಗಿವೆ.

2. STAYING ALIVE : Women, Ecology and Survival in india

ಲೇಖಕಿ : **ವಂದನಾಶಿವ**
ZED ಬುಕ್ಸ್, ಲಂಡನ್ ಮತ್ತು
ಕಾಳಿ ಫಾರ್ ವಿಮೆನ್, ಡೆಲ್ಲಿ 1988

ಸ್ತ್ರೀತ್ವ, ಸಂರಕ್ಷಣೆ ಮತ್ತು ಇಕೋಲಾಜಿಕಲ್ ತತ್ವ ಗಳಿಂದ ಸಂಪೂರ್ಣ ಹೊರತಾದ ಪ್ರಸ್ತುತದ ಅಭಿವೃದ್ಧಿ ಯನ್ನು ವಂದನಾಶಿವ mal development ಎಂದು ವರ್ಣಿಸುತ್ತಾರೆ. ಇದೇ ಚರ್ಚೆಯನ್ನೇ ಅವರು ಈ ಪುಸ್ತಕ ದಲ್ಲಿ ಬೆಳೆಸುತ್ತಾರೆ. ಇದಕ್ಕೆ ಆಕೆಯ ಬೌತಪಜ್ಞಾನ ಹಿನ್ನೆಲೆ ಮತ್ತು ಕಾರ್ಯಕರ್ತೆಯಾಗಿನ ಅನುಭವಗಳು ಶ್ರೀಮಂತ ಗ್ರಾಸ ಒದಗಿಸಿವೆ.

'ಸ್ಟೆಯಿಂಗ್ ಅಲೈವ್' ಆಧುನಿಕ ಪಾಶ್ಚಿಮಾತ್ಯ ವಿಜ್ಞಾನ ಮತ್ತು ಅಭಿವೃದ್ಧಿಯ ಟೀಕೆಯನ್ನು ಕಟ್ಟಿ ಕೊಡುತ್ತಲೇ, ತನ್ನದೇ ತತ್ವ-ವಿಜ್ಞಾನಗಳನ್ನು ಹೊಂದಿ ರುವ ಸಂಸ್ಕೃತಿಯೊಂದರ ಮೇಲೆ ಇದರ ಪರಿಣಾಮಗಳನ್ನು ಸಮರ್ಥವಾಗಿ ವಿವರಿಸುತ್ತದೆ. ಭಾರತೀಯ ಸಂದರ್ಭದ ಬಹುತೇಕ ಮಾನವ-ಪ್ರಕೃತಿ ಸಂಬಧದ ಜ್ಞಾನವು ಇಲ್ಲಿನ ಮಹಿಳೆಯರಲ್ಲಿಯೇ ಮನೆಮಾಡಿದ್ದು, ಹಸಿರುಕ್ರಾಂತಿ, ಕಮರ್ಷಿಯಲ್ ಫಾರೆಸ್ಟ್ರಿ ಮತ್ತು ಬೃಹತ್ ನೀರಿನ ಯೋಜನೆಗಳೇ ಮುಂತಾದ ಆಧುನಿಕ ಅಭಿವೃದ್ಧಿಯ ಯೋಜನೆಗಳ ಬಾರಿ ಹೊಡೆತದಿಂದ ತತ್ತರಿಸುತ್ತಿರುವ ತಮ್ಮ ಇಂತಹ ಜ್ಞಾನವನ್ನು ಕಾಪಾಡಿಕೊಳ್ಳಲು ಇಲ್ಲಿನ ಮಹಿಳೆಯರು ನಡೆಸುತ್ತಿರುವ ನಿರಂತರ ಹೋರಾಟವನ್ನು ವಂದನಾಶಿವ ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ. ಇಂತಹ ಮಹಿಳೆಯರ 'ಸಾಹಸ' ಕತೆಗಳಿಂದ ಈ ಪುಸ್ತಕ ಜೀವಂತವಾಗುತ್ತದೆ.

# ಸಾಂಪ್ರದಾಯಿಕ ಆಹಾರ ಸಂರಕ್ಷಣೆ ಮತ್ತು ಮಹಿಳೆ

ಸರಸ್ವತಿ ದು. ಗಾಯತ್ರಿ ವಿ.

ತಾಯಿ, ಮಗಳು ಮದುವೆ ಮನೆಗೆ ಹೋಗಿ ವಾಪಸ್ಸಾಗುತ್ತಾರೆ. ಸ್ವಲ್ಪ ಸಮಯದಲ್ಲೇ ಮಗಳು ವಾಂತಿ ಮಾಡಿಕೊಳ್ಳಲು ಶುರು ಮಾಡುತ್ತಾಳೆ. ತಕ್ಷಣ ತಾಯಿ ಅಡಿಗೆ ಮನೆಯ ಅಟ್ಟದಲ್ಲಿ ಬಾಯಿ ಕಟ್ಟಿಟ್ಟ ಜಾಡಿಯಿಂದ ಏನೋ ಒಂದನ್ನು ತೆಗೆದು ಮಗಳ ಬಾಯಿಯಲ್ಲಿ ಹಾಕುತ್ತಾ "ನಿಧಾನಕ್ಕೆ ಚೀಪಿಕೊಂಡು ತಿನ್ನು, ವಾಂತಿ ತಡೆಯುತ್ತೆ, ನನಗೆ ಗೊತ್ತಿತ್ತು, ನೀನು ಮದುವೆ ಮನೆಯಲ್ಲಿ ಆ ಎಣ್ಣೇದನ್ನ ಅಷ್ಟೊಂದು ತಿನ್ನೋವಾಗಲೇ ನಿನ್ನ ಮೈಗಾಗಲ್ಲ ಅನ್ನೋದು" ಎಂದು ಎಥೆ ಸವರಿ ಸಮಾಧಾನ ಮಾಡುತ್ತಾಳೆ. ಕೆಲ ಸಮಯದಲ್ಲೇ ಮಗಳು ಜಿಗಿಯುತ್ತಾ ಹೊರ ಓಡುತ್ತಾಳೆ, ತನ್ನ ಯಾವದೋ ಕೆಲಸಕ್ಕೆ. ಇಂತವು ಪ್ರತಿನಿತ್ಯ ಸಾಮಾನ್ಯವಾಗಿ ಎಲ್ಲ ಮನೆಯಲ್ಲೂ ನಡೆಯುವ ಸಂಗತಿಯೇ. ಹೆಂಗಸೊಬ್ಬಳ "ಮನೆ ನೋಡಿಕೊಳ್ಳುವ" ಕೆಲಸದ ಭಾಗ ಎಂದಷ್ಟೇ ಇದು ತೋರಬರುತ್ತದೆಯೇ ವಿನಃ ಬೇರೆ ಎಂತಹ ವಿಶೇಷವೂ ಇದರಲ್ಲಿ ಇಲ್ಲ. ಹಾಗೆ ಇರಬಹುದಾದ್ದನ್ನು ಗುರುತಿಸುವ ಅವಶ್ಯಕತೆಯೇ ಕಂಡು ಬಂದಿಲ್ಲ ಕೂಡ.

ಇದು ಹೀಗೆಯೇ. ಪ್ರಕೃತಿಯ ಜೀವಕೋಟಿಯ ಪ್ರತಿಯೊಂದಕ್ಕೂ ತನ್ನದೇ ಬದುಕಿನ ಲಯವಿದೆ. ಕರಾರುವಾಕ್ಕಾಗಿಯೇ ಇದು ನಡೆಯಬೇಕು. ಒಮ್ಮೊಮ್ಮೆ ಏನೋ ತಪ್ಪಿನಿಂದ ಲಯ ತಪ್ಪಿದಾಗ ಅದನ್ನು ಸರಿಪಡಿಸಿಕೊಳ್ಳುವ ತಕ್ಷಣದ ವಿಧಾನಗಳೂ ಇವೆ. ಇಲ್ಲಿ ಅಡಗಿರುವ ನೈಪುಣ್ಯ, ಸೂಕ್ಷ್ಮ ಜ್ಞಾನ ಒಂದು ವಿಸ್ಮಯ. ಈ ವಿಸ್ಮಯವನ್ನು ಭೇದಿಸುವ ಶಕ್ತಿ ಸಾಲದಿರುವುದರಿಂದಲೇ ಅದರ ಬಗ್ಗೆ ತಲೆಕೆಡಿಸಿಕೊಳ್ಳುವ ಅವಶ್ಯಕತೆ ಇಲ್ಲವೆಂಬ ಭಾವ ಇರುವುದು. ಫುಕೋವೊಕಾರಂತ ಧೀಮಂತರು ಈ ಲಯದೊಂದಿಗೆ ಬದುಕುವ ಮೂಲಕ ಅದಕ್ಕೆ ಕೊನೇ ಪಕ್ಷ ಪೂರಕವಾಗಿರಬಲ್ಲಂತಹ ವಿವೇಕವನ್ನು ತೋರಬಲ್ಲರು. ಆದರೆ 'ಆಧುನಿಕ' ಮನಸ್ಸುಗಳು, ಕೃತ್ಯಗಳು ಆ ಲಯವನ್ನೇ ಅಲ್ಲಾಡಿಸುತ್ತಾ ನುಚ್ಚು ನೂರು ಮಾಡುತ್ತಿವೆ. ಪ್ರಕೃತಿಯ ಜೀವಕೋಟಿಯಲ್ಲಿ ಒಂದಾದ ಮನುಷ್ಯಕುಲ ತನ್ನ ಅತಿ ವರ್ತನೆಯಿಂದ, ಇಡೀ ಪ್ರಕೃತಿಯೇ ತನ್ನ ಸ್ವತ್ತು ಎಂಬ ವಿವೇಚನಾರಹಿತ ಜಂಭದಿಂದ ಇಡೀ ಪ್ರಕೃತಿಯ ಮೇಲೆ ತನ್ನ ಪ್ರಭುತ್ವ ಸಾಧಿಸುತ್ತಿರುವ ಇಂದಿನ ಸಂದರ್ಭದಲ್ಲಿ, ತನ್ನ ಇಂತಹ ಧೋರಣೆಯಿಂದ ತಮ್ಮ ಸ್ವಂತ ಬದುಕುಗಳೇ ಲಯ ತಪ್ಪಿ ಹುಚ್ಚೆದ್ದು ಕುಣಿಯುತ್ತಿರುವುದನ್ನು ಒಂದು ಕಡೆಯಲ್ಲಿ ಕಾಣುತ್ತಿದೆ. ಆದರೆ ಪ್ರಭುತ್ವದ ದಾಹ ಎಷ್ಟಿರುತ್ತದೆಂದರೆ ಅದು ವಿವೇಕ, ವಿವೇಚನೆಗಳನ್ನು ಸಂಪೂರ್ಣ ಕುರುಡು ಮಾಡಿ ಬಿಡುತ್ತವೆ. ಇದರ -ಆಕ್ಟೋಪಸ್ ಬಾಹುಗಳು ತಮ್ಮನ್ನೇ ಸುತ್ತಿಕೊಳ್ಳುತ್ತಿರುವುದನ್ನು ಗಮನಿಸುವ ವ್ಯವಧಾನ ಕೂಡ ಇಲ್ಲಿ ಇರುವುದಿಲ್ಲ. ತಿನ್ನುವ ಆಹಾರವೇ ವಿಷವಾಗಿ, ನಿಂತ ಭೂಮಿಯೇ ಬರಡಾಗಿ ನಿಧಾನಕ್ಕೆ ವಿನಾಶದತ್ತ ಕರೆದೊಯ್ಯುತ್ತದೆ.

ತಿನ್ನುವ ಆಹಾರ ವಿಷವಾಗುತ್ತದೆ ಎಂದೆವಷ್ಟೆ. ಇದೇನೂ ಭಾವನಾತ್ಮಕ ಹುಸಿ ಮಾತಲ್ಲ. ಕೀಟನಾಶಕ, ರಾಸಾಯನಿಕ ಗೊಬ್ಬರ, ಸಂರಕ್ಷಕಗಳ ಹಾವಳಿ ನಮ್ಮ ಆಹಾರದ ಮೇಲೆ ಎಷ್ಟಿದೆಯೆಂದರೆ ಇಂದು ನಾವು ತಿನ್ನುತ್ತಿರುವ ಆಹಾರವೇ ನಿಧಾನ ವಿಷವಾಗುತ್ತಿದೆ. ಪ್ರಾಕೃತಿಕವಾಗಿ ಆಚರಿಸುತ್ತಾ ಬಂದ "ಜೀವ ಪ್ರಿಯ" ವಿಧಾನಗಳ ಮೇಲೆ ಇವುಗಳ ತೀವ್ರ ಹಾವಳಿಯಿಂದ ಅವು ಸಂಪೂರ್ಣ ಹೆದರಿಕೊಂಡು ಮೂಲೆಸೇರಿಬಿಟ್ಟಿವೆ.

ಇಂತಹ ಹಿನ್ನೆಲೆಯಲ್ಲಿ ವಿಚ್ಛಿದ್ರಕಾರಕ ಆಧುನಿಕ ರೀತಿ ನೀತಿಗಳಿಗೆ ಪರ್ಯಾಯವಾಗಿ ಸಾಂಪ್ರದಾಯಿಕವಾಗಿ ಎಂತಹ ಅಖಂಡ, ಜೀವಪ್ರಿಯ ವಿಧಾನಗಳಿದ್ದವು ಎಂಬುದನ್ನು ಪರಿಶೀಲಿಸಿ, ಅದರ ತಳಹದಿಯ ಮೇಲೆ ಬೆಳವಣಿಗೆ ಮಾಡುವುದು ಇಂದಿನ ಸಂದರ್ಭಕ್ಕೆ ಅತಿ ಮುಖ್ಯ. ಇದೇ ಹಿನ್ನೆಲೆಯಲ್ಲಿಯೇ ನಾವು ಸಾಂಪ್ರದಾಯಿಕ ಆಹಾರ ಸಂರಕ್ಷಣೆಯ ಬಗ್ಗೆ ಒಂದು ಸಣ್ಣ ಸಮೀಕ್ಷೆಯನ್ನು ಕರ್ನಾಟಕದಲ್ಲಿ ನಡೆಸಿದೆವು. ಅದನ್ನು ಆಧರಿಸಿಯೇ ಈ ಪುಟ್ಟ ಲೇಖನವನ್ನು ತಯಾರಿಸಲಾಗಿದೆ.

ಸಮೀಕ್ಷೆ ಕೈಗೊಂಡಾಗ ನಮಗೆ ಬರೀ ಹೆಂಗಸರನ್ನೇ ಭೇಟಿ ಮಾಡುವ ಉದ್ದೇಶ ಇರಲೇ ಇಲ್ಲ. ಆದರೆ ಸಮೀಕ್ಷೆ ನಡೆಸುತ್ತಾ ಹೋದಂತೆಲ್ಲಾ ತಾನೆ ತಾನಾಗಿ ಸ್ಪಷ್ಟವಾಗುತ್ತಾ ಬಂದ ಅಂಶವೆಂದರೆ, ಆಹಾರ ಸಂರಕ್ಷಣೆಯಲ್ಲಿ ಬಹು ಮುಖ್ಯ ಪಾತ್ರ ವಹಿಸುವುದು ಮಹಿಳೆಯರೇ ಎಂಬುದು.

ನಮ್ಮ ಕ್ಷೇತ್ರ ಸಮೀಕ್ಷೆ ನಡೆದದ್ದು ಬಹುಪಾಲು ಹಳ್ಳಿಗಳಲ್ಲಿ. ಉತ್ತರ ಕರ್ನಾಟಕ, ಮಲೆನಾಡು, ಕರಾವಳಿ, ಬಯಲು ಸೀಮೆ ಹೀಗೆ ಭೌಗೋಳಿಕ ಸನ್ನಿವೇಶಗಳನ್ನು ಪ್ರಾತಿನಿಧಿಕವಾಗಿ ಆರಿಸಿಕೊಂಡಿದ್ದೆವು. ಗಂಡಸರು ಮೂಡೆ ತುಪ್ಪೆ, ಕಣಜ ಮುಂತಾದವುಗಳನ್ನು ಕಟ್ಟುವುದನ್ನು ಬಿಟ್ಟರೆ ಉಳಿದ ಎಲ್ಲಾ ರೀತಿಯ ಸಂರಕ್ಷಣೆಗಳನ್ನೂ ಹೆಂಗಸರೇ ಮಾಡುವುದು. ಎರಡು ದಿನಗಳಿಂದ ಹಿಡಿದು ವರ್ಷಾನುಗಟ್ಟಲೆಯವರೆಗೂ ಸಂರಕ್ಷಣೆಯನ್ನು ಮಾಡಬೇಕಾಗುತ್ತದೆ. ಬೇರೆ ಬೇರೆ ಆಹಾರ ಪದಾರ್ಥಗಳನ್ನು. ಇವುಗಳಲ್ಲಿ ಪಕ್ಕಾ ಆಹಾರಗಳು (cooked food) ಕಚ್ಚಾ ಆಹಾರಗಳು (uncookeb food) ಎರಡೂ ಇವೆ. ಇವುಗಳ ಸಂರಕ್ಷಣೆಯ ವಿಧಾನಗಳು ಅಲ್ಲಿನ ಹವಾಗುಣ, ನೈಸರ್ಗಿಕ ಸ್ಥಿತಿಗತಿಗಳು, ಜನಜೀವನದ ರೀತಿ ನೀತಿಗಳು, ಸಾಂಸ್ಕೃತಿಕ ಸನ್ನಿವೇಶಗಳು ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಅಡಿಗೆ ಊಟಗಳನ್ನು ಇವುಗಳಿಂದ ಬೇರ್ಪಡಿಸಲು ಸಾಧ್ಯವೇ ಆಗುವುದಿಲ್ಲ.

ಅನೇಕ ಅಡಿಗೆಗಳನ್ನು ಮಾಡುವ ರೀತಿಯಲ್ಲಿಯೇ ಸಂರಕ್ಷಣೆಯೂ ಇರುತ್ತದೆ. ಸಂರಕ್ಷಿಸಲಿಕ್ಕಾಗಿಯೇ ವಿಶೇಷವಾಗಿ ಮಾಡುವಂತವು ಇನ್ನೊಂದು ಬಗೆಯವು. ಕುದಿಸುವುದು, ಕರಿಯುವುದು, ಹುರಿಯುವುದು, ಬೆಲ್ಲ ಸಕ್ಕರೆ ಪಾಕಗಳನ್ನು ಬಳಸುವುದು ಇತ್ಯಾದಿ ವಿಧಾನಗಳು ಅಡಿಗೆಯ ರೀತಿಯೇ ಆಗಿರುತ್ತದೆ. ಉದಾಹರಣೆಗೆ, ಸಾರು, ಗೊಜ್ಜುಗಳನ್ನು ಕುದಿಸದೆ, ಚಕ್ಕುಲಿ–ಕೋಡುಬಳೆಗಳನ್ನು ಕರಿಯದೆ, ಚಟ್ಣಿಪುಡಿ-ಮಸಾಲೆಪುಡಿಗಳಿಗೆ ಹುರಿಯದೆ, ರವೆ ಉಂಡೆ-ಕಾಯಿ ಹೋಳಿಗೆಗಳಿಗೆ ಪಾಕಮಾಡದೆ ಮಾಡಲು ಸಾಧ್ಯವೇ ಇಲ್ಲ. ಆದರೆ ಈ ವಿಧಾನಗಳೇ ಅವುಗಳನ್ನು ಅನೇಕ ದಿನಗಳವರೆಗೆ, ತಿಂಗಳುಗಳವರೆಗೆ ರಕ್ಷಿಸಿಡಬಲ್ಲುವು. ಇನ್ನು ಕೆಲವೊಂದಕ್ಕೆ ರಕ್ಷಿಸಲಿಕ್ಕಾಗಿ ಕೆಲವು ಹೊರಗಿನ ಪದಾರ್ಥಗಳನ್ನು ಬಳಸಲಾಗುವುದು. ನೈಸರ್ಗಿಕವಾಗಿ ಸಿಗುವ ಮಣ್ಣು, ಉಪ್ಪು, ಸೆಗಣಿ, ಸುಣ್ಣ, ಜೇನುತುಪ್ಪ, ಒಲೆ ಬೂದಿ, ಇಂಗು, ಅರಿಶಿನ, ನುಗ್ಗೆ ಚಕ್ಕೆ ವೀಳೆದೆಲೆ, ಕರಿಬೇವು, ಏಲಕ್ಕಿ ಸಿಪ್ಪೆ, ಗೇರುಬೀಜದಸಿಪ್ಪೆ, ಮೆಣಸಿನಕಾಯಿ ಬೀಜ, ನಾಯಿ ತುಳಸಿ ಬೀಜ, ನೀಲಗಿರಿ, ಬೇವು, ಬಾಳೆಲೆ, ಜಾರಿಗೆ ಎಲೆ, ಭತ್ತ-ಜೋಳ-ರಾಗಿ ಹೊಟ್ಟುಗಳು ಇವೆಲ್ಲ ನಮ್ಮಲ್ಲಿನ ಸಂರಕ್ಷಕಗಳು.

**ಪ್ರಕೃತಿಯೇ ಸಂರಕ್ಷಕದಂತೆ :**

ಹುರುಳಿ, ಅವರೆ, ತೊಗರಿ ಕಾಳುಗಳಿಗೆ, ಬೆಳ್ತಕ್ಕಿಗೆ ಸುಣ್ಣವನ್ನು ಬೆರೆಸಿ ಕೆಡದಂತೆ ಇಡುತ್ತಾರೆ, ತಾಳೆ ಬೆಲ್ಲವನ್ನೂ ಕುದಿಸುವಾಗ ಸುಣ್ಣ ಹಾಕಬೇಕು. ಶ್ಯಾವಿಗೆಯನ್ನು ತುಂಬಿಡುವ ಮಣ್ಣಿನ ಗಡಿಗೆಯ ಒಳಗೆ ಸುಣ್ಣವನ್ನು ತೆಳ್ಳಗೆ ಹಚ್ಚಿ ಒಣಗಿಸಿ ತುಂಬಿಡುತ್ತಾರೆ.

ಸೌತೆ, ಕುಂಬಳ ಬೀಜಗಳಿಗೆ, ಬೀನ್ಸ್, ಅಲಸಂದೆ, ಹುರಳಿ, ಅವರೆ ಕಾಳುಗಳಿಗೆ ಬೂದಿಯನ್ನು ಕಲೆಸಿ ಸವರಿ ಒಣಗಿಸಿ ರಕ್ಷಿಸಿಡುತ್ತಾರೆ. ತುಂಬಿಡುವ ಕುಪ್ಪೆಯ ಅಡಿಯಲ್ಲಿ ಬೂದಿ ಚೆಲ್ಲುತ್ತಾರೆ.

ಕಾಳುಗಳಿಗೆ, ಹಲಸಿನ ಬೀಜಕ್ಕೆ ಕೆಂಪು ಮಣ್ಣು ಕಲೆಸಿ ಒಣಗಿಸಿ ಇಡುತ್ತಾರೆ. ಹಾಗೆಯೇ ರಾಗಿ ಮೂಡೆಯನ್ನು ಮಣ್ಣು ಸಗಣಿಗಳಿಂದ ಸೀಲ್ ಮಾಡುತ್ತಾರೆ. ಗೆಡ್ಡೆ-ಗೆಣಸುಗಳಿಗೆ ಸಗಣಿ ಮೆತ್ತಿ ಒಣಗಿಸುತ್ತಾರೆ. ಕಾಳು, ದವಸ, ಮೆಣಸು, ಕಾಫಿಗಳನ್ನು ಒಣಗಿಸಲು ಸಗಣಿಯಿಂದ ಸಾರಿಸಿದ ನೆಲವೇ ಆಗಬೇಕು.

ಮೀನು, ಮಾಂಸ, ಉಪ್ಪಿನ ಕಾಯಿಗಳು, ಹುಣಸೇಹಣ್ಣು ಅಲ್ಲದೆ ಹಲಸು, ಮಾವು, ಅತ್ತಿ, ಬಾಳೆ ದಿಂಡು ಇತ್ಯಾದಿಗಳನ್ನು ಕಾಪಾಡಿ ಇಡಲು ಉಪ್ಪೇ ಸಾಧನ. ಅಲ್ಲದೆ ದನಿಯಾ ಪುಡಿ, ಸಾಂಬಾರು ಪುಡಿಗಳು ಕೆಡದಂತಿಡಲು ಮೇಲೆ ಉಪ್ಪು ಹರಡಿ ಇಡುತ್ತಾರೆ.

ಉಪ್ಪಿನಕಾಯನ್ನು ತುಂಬಿ ಮುಚ್ಚಳ ಮುಚ್ಚಿದ ಮೇಲೆ ಇಂಗನ್ನು ಉದುರಿಸುವುದು, ತುಂಬುವ ಮೊದಲು ಒಳಗೆಲ್ಲಾ ಇಂಗು ಸವರುವುದು ಸರ್ವೇ ಸಾಮಾನ್ಯ.

ತುಪ್ಪಕ್ಕೆ ಅರಿಶಿನ ಬೆರೆಸಿ ಕುದಿಸುವುದು ವಾಡಿಕೆ. ಹಾಗೆಯೇ ಜೇನುತುಪ್ಪದಲ್ಲಿ ನೆನೆಸಿಟ್ಟಾಗ ಹಣ್ಣಿನ ಹೋಳುಗಳು ಕೆಡದೇ ನಿಲ್ಲುತ್ತವೆ.

ಭತ್ತಕ್ಕೆ ಊಜಿನೊಣ ಬರದಂತೆ ಇಸಮುದಾರಿ ಸೊಪ್ಪು ಕಾಪಾಡಿದರೆ, ನೆಂಜಿರು ಸೊಪ್ಪು ಹಲಸಿನ ಬೀಜವನ್ನು ಸಂರಕ್ಷಿಸುತ್ತದೆ. ವೀಳೆದೆಲೆ, ಕರಿಬೇವು, ಏಲಕ್ಕಿ ಸಿಪ್ಪೆಗಳು ತುಪ್ಪವನ್ನು ಕೆಡದಂತಿಡುತ್ತವೆ. ನಾಯಿ ತುಳಸಿ, ಮೆಣಸಿನಕಾಯಿಯ ಬೀಜಗಳು ಕಾಳುಗಳೊಂದಿಗೆ ಬೆರೆಸಿಟ್ಟಾಗ ಸಂರಕ್ಷಕಗಳಾಗುತ್ತವೆ. ಹಾಗೆಯೇ ಜಾರಿಗೆ ಎಲೆ, ನೀಲಗಿರಿ, ಬೇವು, ಬಾಳೆ ಎಲೆಗಳು.

ದೊಡ್ಡ ದೊಡ್ಡ ಕಣಜ ಹಗೇವುಗಳಲ್ಲಿ ಭತ್ತ, ಕಾಳುಗಳನ್ನು ತುಂಬಿಡುವಾಗಲಂತೂ ಭತ್ತ-ಜೋಳ-ರಾಗಿಯ

ಹೊಟ್ಟುಗಳು ತುಂಬಾ ಸಹಾಯಮಾಡುತ್ತವೆ. ಹಾಗೆಯೇ ಕಿತ್ತಲೆ ಹಣ್ಣು, ಹಂದಿ ಮಾಂಸಗಳಿಗೂ ಸಹ. ಹೀಗೆ ಹೇಳುತ್ತಾ ಹೋದರೆ ಇಡೀ ಪ್ರಕೃತಿಯೇ ತನ್ನ ಉತ್ಪನ್ನ ಗಳನ್ನೆಲ್ಲಾ ಒಂದಕ್ಕೊಂದು ರಕ್ಷಕವನ್ನಾಗಿ ಸೃಷ್ಟಿಸಿದೆ ಯೇನೋ ಎಂದು ಭಾಸವಾಗುವಂತಾಗುತ್ತದೆ.

ಸೂರ್ಯನ ಶಾಖದಷ್ಟು ಪರಿಣಾಮಕಾರಿಯಾದ ಸಂರಕ್ಷಕವು ಬೇರೊಂದಿಲ್ಲ. ನೂರಾರು ಆಹಾರ ಪದಾರ್ಥ ಗಳನ್ನು ಅವು ಕಚ್ಚಾ ಆಗಿರಲಿ ಪಕ್ಕಾ ಆಗಿರಲಿ, ಬಿಸಿಲಲ್ಲಿ ಒಣಗಿಸಿ ಇಡುವುದೇ ಒಂದು ಅತ್ಯಂತ ದೊಡ್ಡ ಸಂರಕ್ಷಣಾ ವಿಧಾನ.

ಕಾಳುಗಳು. ದವಸಗಳು, ಮೀನು, ಮಾಂಸ, ತರಕಾರಿ ಹಣ್ಣಿನ ಬೀಜಗಳು ಮುಂತಾದ ಕಚ್ಚಾ ಪದಾರ್ಥಗಳ ನ್ನಲ್ಲದೆ ಹಪ್ಪಳ, ಸಂಡಿಗೆಗಳು, ಬೇಯಿಸಿದ ಅಡಿಕೆ, ಕುಚ್ಚಲಕ್ಕಿ, ಚಿಪ್ಸ್‌ಗಳು, ದೋಸೆ, ಅನ್ನ, ಕಡುಬು, ರೊಟ್ಟಿ, ಒಣಕಾರ ಇತ್ಯಾದಿ ಪಕ್ಕಾ ಆಹಾರಗಳನ್ನು ಬಿಸಿಲಲ್ಲಿ ಒಣಗಿಸಿ ತುಂಬಿಡುವುದು ವಾಡಿಕೆ. ಸ್ವಲ್ಪ ಕೆಡುವಂತಾದರೆ ಮತ್ತೆ ಬಿಸಿಲಲ್ಲ ಹಾಕಿ ಒಣಗಿಸಿ ತುಂಬಿಡು ತ್ತಾರೆ ನಮ್ಮವರು. ಬಿಸಿಲಿನ ಮೇಲೆಯೇ ನಿಂತಿದೆ ನಮ್ಮಲ್ಲಿನ ಆಹಾರ ಪದ್ಧತಿಯ ಬಹು ಮುಖ್ಯ ಭಾಗ.

ಗಾಳಿ, ಇಬ್ಬನಿ, ಹೊಗೆಗಳು ನಮ್ಮಲ್ಲಿನ ಸಂರಕ್ಷಣಾ ಸಾಧನಗಳ ಬಹುಮುಖ್ಯ ಅಂಗಗಳು.

ಕೆಲವು ಆಹಾರ ಪದಾರ್ಥಗಳಿಗೆ ಗಾಳಿ ಆಡುವುದು ಮುಖ್ಯವಾದರೆ, ಕೆಲವಕ್ಕೆ ಗಾಳಿ ಆಡಕೂಡದು. ಉದಾಹರಣೆಗೆ, ತರಕಾರಿಗಳಿಗೆ, ಕೆಲವೊಂದು ಬಗೆಯ ತಿನಿಸುಗಳಿಗೆ (ಚಟ್ನಿಗಳು, ಕಾಯಿಹೋಳಿಗೆ, ಕರ್ಜಿಕಾಯಿ, ಹಾಲುಂಡಿಗೆ, ಮೀನಿನ ಉಪ್ಪಿನಕಾಯಿ, ಹೀಗೆ) ಗಾಳಿ ಆಡುವುದು ತುಂಬಾ ಮುಖ್ಯ. ಅದೇ ಸಮಯದಲ್ಲಿ, ಉಪ್ಪಿನ ಕಾಯಿಗಳು, ತಂಬಿಟ್ಟು, ತೊಕ್ಕು, ಪತ್ರೊಡೆ, ಹಲ್ವ, ಚಕ್ಕುಲಿ ಕೋಡುಬಳೆಗಳು ಕೊತ್ತಂಬರಿ, ಕರಿಬೇವಿನ ಚಟ್ನಿ, ಸೇರಿದಂತೆಇನ್ನೂ ಅನೇಕ ತಿನಿಸುಗಳಿಗೆ ಗಾಳಿ ಆಡಕೂಡದು.

ಕಾಳುಗಳನ್ನು ಒಣಗಿಸುವ ಪ್ರಕ್ರಿಯೆಯಲ್ಲಿ ಇಬ್ಬನಿ ಮುಖ್ಯ. ಹಾಗೆಯೇ ತರಕಾರಿಗಳನ್ನು ಇಬ್ಬನಿಯಲ್ಲಿ ಹಾಕಿಬಿಟ್ಟರೆ ಇದೀಗ ಬಿಡಿಸಿ ತಂದಷ್ಟು ನಳನಳಿಸುತ್ತವೆ.

ಗಾಳಿ ಆಡದಂತೆ ರಕ್ಷಿಸಿಡುವ ಬಹುತೇಕ ಎಲ್ಲ ಪದಾರ್ಥಗಳನ್ನೂ ಅಡಿಗೆ ಮನೆಯ ಹೊಗೆಯಾಡುವ ಅಟ್ಟದಲ್ಲಿ ಇಡುವುದು ವಾಡಿಕೆ. ಹಾಗೆಯೇ ಗಾಳಿ ಯಾಡುವಂತೆ ತಿಂಗಳು-ವರ್ಷಾನುಗಟ್ಟಲೆ ಇಡಬಯಸುವ ಅನೇಕ ತರಕಾರಿಗಳನ್ನು (ಈರುಳ್ಳಿ, ಬೆಳ್ಳುಳ್ಳಿ ಸೌತೆಕಾಯಿ, ಕುಂಬಳಕಾಯಿ, ಶುಂಠಿ, ಅರಿಶಿನ) ಮತ್ತು ಕೆಲವೊಂದು ತಿನಿಸುಗಳನ್ನು ತೆಂಗಿನ ಗರಿ, ಬಾಳೆನಾರುಗಳಲ್ಲಿ ಕಟ್ಟಿ ಮಾಡಿಗೆ ನೇತುಹಾಕುವುದು ವಾಡಿಕೆ.

ಬಿದಿರು, ಮಣ್ಣು, ಸಗಣಿಗಳೇ ಮುಖ್ಯವಾಗಿರುವ, ಹುಲ್ಲು-ಹೊಟ್ಟುಗಳನ್ನು ಜತೆಗೆ ಹೊಂದಿರುವ ಬೃಹತ್ ರಚನೆಗಳಾದ ಕಣಜ, ಮುಡಿ, ಹಗೇವು, ಒಣಿವೆಗಳು ಎಲ್ಲಾ ಬಗೆಯ ದವಸ-ಧಾನ್ಯಗಳ ಸಂರಕ್ಷಣೆಯ ಸಾಧನ ಗಳು. ಇವು ತಮ್ಮ ರಚನೆಯಲ್ಲಿ ತುಂಬಾ ನಿಪುಣತೆ ಯನ್ನು ಬಯಸುತ್ತವೆ.

**ಮನೆಯೇ ಕೈಗಾರಿಕೆಯಂತೆ :**

ಹಳ್ಳಿಯಲ್ಲಿ ಯಾವದೇ ಮನೆಯನ್ನು ಪ್ರವೇಶಿಸಿದಾಗ ಮೊದಲಿಗೆ ಕಾಲಿಡುವುದು ಅಂಗಳ. ನಂತರ ಜಗುಲಿ. ಸ್ಥಿತಿವಂತರ ಮನೆಯಾದರೆ, ಒಳ ಹೊಕ್ಕಂತೆ ಮಧ್ಯದಲ್ಲಿ ವಿಸ್ತಾರವಾದ ಖಾಲಿ ಭಾಗ. ಅದರ ನಾಲ್ಕೂ ಕಡೆಗೂ ಹೊಂದಿಕೊಂಡ ಇತರ ರಚನೆಗಳು (ತೊಟ್ಟಿ ಮನೆ). ಅಡಿಗೆ ಮನೆಯಲ್ಲಿ ಸೌದೆಯ ಸಾಂಪ್ರದಾಯಿಕ ಒಲೆ. ಅದರ ಮೇಲಕ್ಕೆ ಹೊಂದಿಕೊಂಡಂತೆ ಒಂದು ಅಟ್ಟ. ಅಲ್ಲಲ್ಲಿ ಕಂಡುಬರುವ ಹೊಸ-ಹಳೆಯ ಅನೇಕ ಚಾಪೆಗಳು, ಕೆಲವಾರು ಪರಕೆಗಳು, ಮಣೆಗಳು ಇದು ಸರ್ವೇ ಸಾಮಾನ್ಯ ಅಂಶ. ಇದರ ಜತೆಗೇ ಉಳಿದ ವಸ್ತುಗಳು ಕುಟುಂಬದ ಸ್ಥಿತಿಗತಿಗೆ ಹೊಂದಿಕೊಂಡಂತೆ ಇರುತ್ತವೆ.

ಅಂಗಳ-ಜಗುಲಿಗಳು ಕ್ರಮವಾಗಿ ಕೈತೋಟಕ್ಕೆ, ಬಂದವರನ್ನು ಕುಳ್ಳಿರಿಸಲಿಕ್ಕೆ ಇರುವ ಜಾಗಗಳು ಎಂಬುದಕ್ಕಿಂತ ಹೆಚ್ಚಾಗಿ ಅವು ಇಲ್ಲಿ ಆಹಾರ ಪದಾರ್ಥ ಗಳನ್ನು ಬಿಸಿಲಿಗೆ ಹರವಲು, ಕಣಜ, ಹಗೇವುಗಳನ್ನು ಕಟ್ಟಿಡಲು ಬಹುಮುಖ್ಯವಾಗಿ ಉಪಯೋಗಕ್ಕೆ ಬರು ವಂತಹವಾಗಿರುತ್ತವೆ. ತೊಟ್ಟಿ ಮನೆಗಳ ಬಹು ಮುಖ್ಯ ಉಪಯೋಗವೇ ಒಣಗಲು ಹಾಕುವುದು. ಒಣಗುತ್ತಲೇ ಇಬ್ಬನಿಯಲ್ಲಿ ತೋಯಬೇಕಾಗಿರುವ ಕಾಳು ಮುಂತಾದ ಆಹಾರ ಪದಾರ್ಥಗಳನ್ನು ಎಡಬಿಡದೆ ಮೂರು-ನಾಲ್ಕು ದಿನಗಳು ಹರಡಿಡಬೇಕಾದಾಗ ತೊಟ್ಟಿ ಮನೆ ತುಂಬಾ ಉಪಯುಕ್ತ.

ಚಾಪೆಗಳು ಕುಳಿತುಕೊಳ್ಳಲು, ಪರಕೆಗಳು ಕಸ ಗುಡಿಸಲು ಎಂಬ ಸೀಮಿತ ಕಲ್ಪನೆ ಸಾಮಾನ್ಯವಾಗಿದೆ.

ಆದರೆ ಮನೆಯಲ್ಲಿರುವ ಚಾಪೆಗಳ ಉಪಯೋಗ ಅದಕ್ಕಿಂತ ತುಂಬಾ ವಿಸ್ತಾರವಾದದ್ದು. ಕಾಳುಗಳನ್ನು ಒಣಗಲು ಹಾಕಲು, ಹಪ್ಪಳ, ಸಂಡಿಗೆ, ಶ್ಯಾವಿಗೆ ಇತ್ಯಾದಿಗಳನ್ನು ಹುಯ್ದು ಬಿಸಿಲಿಗಿಡಲು ಚಾಪೆಯೇ ಬೇಕು. ಮನೆಯಲ್ಲಿ ಏನೊಂದು ಆಹಾರ ಪದಾರ್ಥ ಗಾಳಿಯಾಡಬೇಕೆಂದರೆ, ಒಣಗಿಸಿಡಬೇಕಾದರೆ ಚಾಪೆ ಬೇಕು. ಹಾಗೆಯೇ ಪರಕೆಗಳು. ಭತ್ತದ ಅರಳನ್ನು ಒಳಗೊಂಡಂತೆ ಅನೇಕ ಪದಾರ್ಥಗಳನ್ನು ಹುರಿಯಬೇಕಾದರೆ ಪರಕೆ ಬೇಕು. ಅನೇಕ ಸಲ ಕೈಯಲ್ಲಿ ಹರಡಲು ಆಗದಷ್ಟು ಜಾಸ್ತಿ ಪ್ರಮಾಣದಲ್ಲಿ ಪದಾರ್ಥಗಳನ್ನು ಒಣಗಲು ಹರಡಬೇಕಾದಾಗ, ಹಾಗೆಯೇ ಒಟ್ಟು ಮಾಡಬೇಕಾದಾಗ ಕಸಪರಕೆ ಬೇಕೇ ಬೇಕು. ಇವಕ್ಕೆಂದೇ ಪ್ರತ್ಯೇಕ ಕಸಪರಕೆಗಳು ಇರುತ್ತವೆ. ಮಣೆಗಳೂ ಹೀಗೆಯೇ. ಹಪ್ಪಳ, ಶ್ಯಾವಿಗೆಯೇ ಮುಂತಾದ ಅನೇಕ ತಿನಿಸುಗಳನ್ನು ಹೊಸೆಯಲು ಮಣೆ ಬೇಕು.

ಇನ್ನು ಅಡಿಗೆ ಮನೆಯ ಅಟ್ಟ. ನಮ್ಮಲ್ಲಿನ ಬಹುತೇಕ ಕಚ್ಚಾ ಮತ್ತು ಪಕ್ಕಾ ಆಹಾರಗಳೆರಡೂ ಕೆಡದಂತೆ ನಿಲ್ಲುವುದು ಅಡಿಗೆ ಮನೆಯ ಹೊಗೆಯಾಡುವ ಅಟ್ಟದಲ್ಲಿ ಎಂದೇ ನಂಬಿಕೆ. ಹೀಗಾಗಿ ಈ ಅಟ್ಟ ಎಷ್ಟೇ ವಿಸ್ತಾರವಾಗಿರಲಿ, ಅದು ಯಾವಾಗಲೂ ದೊಡ್ಡ-ಸಣ್ಣ ಮೂಟೆಗಳಿಂದ, ಜಾಡಿಗಳಿಂದ, ಡಬ್ಬಗಳಿಂದ ತುಂಬಿ ಹೋಗಿರುತ್ತದೆ.

**ನಾವೇಕೆ ರಕ್ಷಿಸಿಡುತ್ತೇವೆ :**

ಹೀಗೆಂದಾಗ ಮೊಟ್ಟಮೊದಲಿಗೆ ಕಂಡು ಬರುವುದು-ಒಂದು ಕಾಲದಲ್ಲಿ ಲಭ್ಯವಿರುವ ಆಹಾರ ಪದಾರ್ಥಗಳನ್ನು ಎಲ್ಲಾ ಕಾಲಗಳಿಗೂ ಲಭ್ಯವಾಗಿಸಲು ರಕ್ಷಿಸಿಡುವುದು ಅವಶ್ಯಕ. ವರ್ಷಕ್ಕೊಮ್ಮೆ ಬೆಳೆಯುವ ದವಸ-ಧಾನ್ಯಗಳನ್ನು ವರ್ಷವಿಡೀ ತಿನ್ನ ಬೇಕಾಗಿರುತ್ತದೆ. ಹಾಗೆಯೇ ಬಿಸಿಲಿನಲ್ಲಿ ಒಣಗಿಸಿಡಬೇಕಾದ ಪದಾರ್ಥಗಳನ್ನು ಬಿಸಿಲು ಕಾಲದಲ್ಲಿ ಮಾಡಿಟ್ಟುಕೊಂಡು ವರ್ಷವಿಡೀ ಉಪಯೋಗಿಸಬೇಕಾಗುತ್ತದೆ. ಇನ್ನು ಉಪ್ಪಿನ ಕಾಯಿ, ಚಟ್ನಿಪುಡಿ, ಹಪ್ಪಳ-ಸಂಡಿಗೆಗಳಿದ್ದರೆ ಬರೀ ಅನ್ನ-ಸಾರು-ಮುದ್ದೆ ಊಟ ಮಾಡುವಾಗ ಜತೆಗೆ ನೆಂಚಿಕೊಂಡರೆ ಸೊಗಸು ಕೊಡುತ್ತದೆ. ಪರಡಿನೋ, ಸೌತೆಕಾಯಿ ಬೀಜವೋ ಮನೆಯಲ್ಲಿದ್ದರೆ ದಿಢೀರಂತೆ ಬಂದವರಿಗೆ ಬಂದು ಪಾಯಸ ಮಾಡಬಹುದು. ಗೊಜ್ಜಿದ್ದರೆ ಅವಸರದಿಂದ ಹೊರಹೋಗುವವರಿಗೆ ಅನ್ನ ಕಲೆಸಿ ಕೊಡಬಹುದು.

ಮೇಲಿನ ಎಲ್ಲಾ ಅಂಶಗಳನ್ನೂ ಗಮನಿಸಿದಾಗ ನಮ್ಮಲ್ಲಿನ ಆಹಾರ ಸಂರಕ್ಷಣೆಯ ವಿವಿಧ ಆಯಾಮಗಳು ಪ್ರಕೃತಿಯೊಂದಿಗೆ, ಸಂಸ್ಕೃತಿಯೊಂದಿಗೆ, ಸಾಮಾಜಿಕ-ಆರ್ಥಿಕ ಸ್ಥಿತಿಗತಿಯೊಂದಿಗೆ ಹಾಸುಹೊಕ್ಕು ಪಡೆದಿದ್ದು, ಈ ಅಖಂಡತೆಯೊಳಗೆ ಸಂಪೂರ್ಣ ಬೆರೆತ ಒಂದು ಭಾಗವಾಗಿ ಕಾಣುತ್ತದೆಯೇ ಹೊರತು ತನ್ನಷ್ಟಕ್ಕೇ ಪ್ರತ್ಯೇಕ ಅಸ್ತಿತ್ವವನ್ನು ಹೊಂದಿಲ್ಲದಿರುವುದು ಸ್ಪಷ್ಟವಾಗುತ್ತದೆ. ಈ ಅಖಂಡ ರಚನೆಯೊಳಗಿನ ಯಾವುದೇ ಒಂದು ಭಾಗದ ಮೇಲೆ ವಿಚ್ಛಿದ್ರಕಾರಕ ಪರಿಣಾಮಗಳಾದಾಗ ಪ್ರತಿಯೊಂದು ಭಾಗಗಳು ತತ್ತರಿಸುತ್ತವೆ. ಇದನ್ನೇ ನಾವಿಂದು ಸ್ಪಷ್ಟವಾಗಿ ಕಾಣುತ್ತಿರುವುದು, ಅನುಭವಿಸುತ್ತಿರುವುದು.

**ಹೆಂಗಸು-ಕುಟುಂಬ-ಅಡಿಗೆ :**

ನಾವು ಧಾರವಾಡದಲ್ಲಿ ಸೋನುಬಾಯಿಯವರನ್ನು ನೋಡಲು ಹೋದಾಗ ಆಕೆ ಚಾಪೆಯ ಮೇಲೆ ಹಾಸಿದ ಬಿಳೀ ಬಟ್ಟೆಯ ಮೇಲೆ ಅರಳಿ ಎಲೆಯ ತುದಿಯಿಂದ ಬಟ್ಟಲಿನಲ್ಲಿ ತುಂಬಿಟ್ಟುಕೊಂಡ ಹಾಲಿನಂತಹ ಏಂತದನ್ನೋ ಅದ್ದಿ ಇಡುತ್ತಿದ್ದರು. ಆಕೆಯೆಂದರು "ಗೋಧಿಯನ್ನು ಒಂದು ಸಲ ನೆನಸಿಟ್ಟು ತಿರುವಿಕೊಂಡು ಬಿಟ್ಟರೆ ಮೂರು-ನಾಲ್ಕು ಪದಾರ್ಥಗಳನ್ನು ಮಾಡಬಹುದು." ಗೋಧಿಯನ್ನು ತೊಳೆದು ಕುಟ್ಟಿ ಮೇಲಿನ ಸಿಪ್ಪೆಯನ್ನು ತೆಗೆದು, ಆರಿ ಹಾಕಿ ಕೇರಿ ನಂತರ ನೀರಲ್ಲಿ ರಾತ್ರಿ ನೆನೆಹಾಕಬೇಕು. ಬೆಳಗ್ಗೆ ಬೇಗ ಎದ್ದು ದೋಸೆ ಹಿಟ್ಟಿನ ತರ ಇದನ್ನು ನುಣ್ಣಗೆ ತಿರುವಬೇಕು. ಒಂದು ಪಾತ್ರೆ ಬಾಯಿಗೆ ಶುಭ್ರವಾದ ಬಟ್ಟೆಯನ್ನು ಕಟ್ಟಿ ತಿರುವಿದ್ದನ್ನು ಸ್ವಲ್ಪ ನೀರಿನಲ್ಲಿ ಅದ್ದಿ ಅಂಟಿನಂತೆ ಬರುವುದನ್ನು ತೆಗೆದು ಉಳಿದದ್ದನ್ನು ಸೋಸಬೇಕು. ಹೀಗೆಯೇ 2-3 ಸಲ ತಿರುವಿ ಸೋಸಬೇಕು. ಸೋಸಿದ್ದು ತಿಳಿಯಾದ ಮೇಲೆ ನೀರನ್ನು ಬಸಿದು ಗಟ್ಟಿಯಾದದ್ದನ್ನು 'ಅಣ್‌ಕಲ್' ಮಾಡಬಹುದು. ಅಂದರೆ ಅರಳಿ ಎಲೆಯ ತುದಿಯಿಂದ ಬಟ್ಟೆಯ ಮೇಲೆ ಇದನ್ನು ಸಣ್ಣ-ಸಣ್ಣದಾಗಿ ಬಿಡುತ್ತಾ ಹೋಗಬೇಕು. ಬೇಗ ಒಣಗುತ್ತದೆ. ಇದರಿಂದ ಪಾಯಸ ಮಾಡಬಹುದು. ಇದೇ ಹಿಟ್ಟಿಗೆ ಬೆಲ್ಲ ಹಾಕಿ ತಿರುವಿ ಹಲ್ವ ಮಾಡಬಹುದು.

ಸೋಸಿದ ಮೇಲೆ ಉಳಿಯುವ ದಪ್ಪ ಹಿಟ್ಟನ್ನು ಸ್ವಚ್ಛವಾಗಿ ತೊಳೆದು ಕೊಡದ ಮೇಲೆ ಅಗಲವಾಗಿ ಹರಡಬೇಕು

(ಹಿಟ್ಟು ಚೂಯಿಂಗ್ ಗಮ್‌ನಂತೆ ಆಗಿರುತ್ತದೆ). 2 ತಾಸಿನ ಮೇಲೆ ಎಣ್ಣೆ ಹಾಕಿ ಕಲೆಸಿಟ್ಟ ರವೆಯನ್ನು ಇದಕ್ಕೆ ಬೆರೆಸ ಬೇಕು. ಸ್ವಲ್ಪ ಅಕ್ಕಿ ಹಿಟ್ಟು, ಎಣ್ಣೆ ಕೂಡಿಸಿ ಚೆನ್ನಾಗಿ ಕುಟ್ಟಬೇಕು; ಸಣ್ಣ-ಸಣ್ಣ ಗುಳಿಗೆ (ಕಡ್ಲೆಕಾಯಿ ಗಾತ್ರ) ಗಳನ್ನು ಮಾಡಿ ಮೈದಾ ಹಿಟ್ಟಿನ ಮೇಲೆ ಚೆಲ್ಲಬೇಕು. ನಂತರ ಮೈದಾ ಹಿಟ್ಟನ್ನೆಲ್ಲ ಕೇರಿ ತೆಗೆದು ಕರಿಯಬೇಕು. ಬೆಲ್ಲದ ಪಾಕದಲ್ಲಿ ಸೇರಿಸಿ ಉಂಡೆ ಕಟ್ಟಬೇಕು. ಪಾಕಕ್ಕೆ ಗಸಗಸೆ, ಏಲಕ್ಕಿ, ಒಣಶುಂಠಿ, ಲವಂಗ ಸೇರಿಸಬೇಕು. ಗುಳಿಗೆಗಳು ಎಣ್ಣೆಯಲ್ಲಿ ಚೆನ್ನಾಗಿ ಅರಳಿವೆಯೆಂದರೆ ನೀವು ಚೆನ್ನಾಗಿ ಕುಟ್ಟಿದ್ದೀರಿ ಎಂದು ಅರ್ಥ. ಇದು ಗುಳಿಗೆ ಉಂಡೆ.

ಸೋಸಿದ ಹಿಟ್ಟಿಗೆ ಉಪ್ಪು, ಎಳ್ಳು, ಗಸಗಸೆ ಸೇರಿಸಿ ಚಕ್ಕುಲಿ, ಸಂಡಿಗೆಗಳನ್ನು ಮಾಡಬಹುದು.

ಅಣ್‌ಕಲ್, ಸಂಡಿಗೆಗಳನ್ನು ಒಂದು ವರ್ಷವೂ, ಗುಳಿಗೆ ಉಂಡೆಯನ್ನು ಒಂದು ತಿಂಗಳೂ, ಹಲ್ವವನ್ನು ಒಂದು ವಾರವೂ ಇಟ್ಟು ತಿನ್ನಬಹುದು. ಪಕ್ಕದಲ್ಲೇ ಸೋನು ಬಾಯಿಯವರು ಸೌತೆ ಬೀಜ, ಶಾವಿಗೆ, ಪರಳಿಗಳನ್ನು ಒಣ ಹಾಕಿದ್ದರು. "ನೋಡಿ, ಒಂದೇ ಸಲಕ್ಕೆ ಇವು ಮೂರನ್ನೂ ಮಾಡಿಕೊಂಡು ಬಿಡಬಹುದು", ಅವರೆಂದರು. ಮೈದಾಹಿಟ್ಟು ರವೆ ಬೆರಸಿ ಚೆನ್ನಾಗಿ ಕುಟ್ಟಬೇಕು. ಸ್ವಲ್ಪ, ಸ್ವಲ್ಪ ತೆಗೆದುಕೊಂಡು ಮಣೆಯ ಮೇಲೆ ಕಾಳುಮಾಡಿ ಪಾತ್ರೆಯ ತಳದಲ್ಲಿ ತೀಡಬೇಕು. ಒಂದು ದಿನ ಪೂರ್ತಿ ಬಿಸಿಲಲ್ಲಿ ಒಣಗಿಸಬೇಕು. ಇದನ್ನು ಸೌತೆಬೀಜ ಎನ್ನುತ್ತಾರೆ. ಇದರಿಂದ ಪಾಯಸ ಮಾಡಬಹುದು. ಇದೇ ಹಿಟ್ಟನ್ನು ಸ್ವಲ್ಪ ತೆಳ್ಳಗೆ ಕಲೆಸಿ, ಕುಟ್ಟಿ ಶಾವಿಗೆ ಮಣೆಯ ಮೇಲೆ ಸಣ್ಣ ಎಳೆಗಳಾಗಿ ಹೊಸೆಯಬೇಕು. ಚೆನ್ನಾಗಿ ಒಣಗಿಸಿ ಪಾಯಸ ಮಾಡಲು ಬರುತ್ತದೆ.

ಇದೇ ಹಿಟ್ಟನ್ನು ಸಣ್ಣ ಕಾಳುಗಳನ್ನಾಗಿ ಮಾಡಿಕೊಂಡು ಬಿದಿರಿನ ಸಣ್ಣ ಕಡ್ಡಿಯ ತುದಿಗೆ ಅರಗನ್ನು ಹಚ್ಚಿ ದುಂಡಗೆ ಮಾಡಿ ಆ ಕಡ್ಡಿಯ ಸಹಾಯದಿಂದ ಈ ಕಾಳನ್ನು ಒಟ್ಟಲಿನೋಪಾದಿಯಲ್ಲಿ ಆಗುವಂತೆ ಒತ್ತಬೇಕು. ಒಣಗಿಸ ಬೇಕು. ಇದರಲ್ಲಿ ಪಾಯಸ ಮಾಡಬಹುದು. ಇವನ್ನೆಲ್ಲ 2–3 ವರ್ಷಗಳವರೆಗೂ ಆಗಾಗ ಒಣಗಿಸುತ್ತಾ ರಕ್ಷಿಸಿಡ ಬಹುದು. ನಮ್ಮೊಂದಿಗೆ ಮಾತ-ಮಾತನಾಡುತ್ತಲೇ ಸೋನುಬಾಯಿಯವರು ಬಿಳಿ ಬಟ್ಟೆಯ ತುಂಬಾ 'ಅಣಕಲ್' ಹುಯ್ದಿದ್ದರು. ಇದರಲ್ಲಿ ಒಳಗೊಂಡಿರುವ ಚುರುಕು, ಸೂಕ್ಷತೆ, ನಾಜೂಕು ಜತೆಗೆ ಪರಿಶ್ರಮ ನಮ್ಮನ್ನು ದಂಗಾಗಿಸಿತು. ಅಡಿಗೆ ಊಟಗಳು ಬರೀ ಹಸಿವನ್ನು ಹಿಂಗಿಸುವ ಸಾಧನಗಳಲ್ಲ. ಅವಕ್ಕೂ ಒಂದು ಕಲಾತ್ಮಕತೆ ಇದೆ. ಸೊಗಸಿದೆ, ವೈವಿಧ್ಯತೆ ಇದೆ. ಆದರೆ ಇದರ ಹಿಂದೆ ಅಡಗಿರುವ ಹೆಂಗಸರ ಪರಿಶ್ರಮ, ಕುಶಲತೆಗಳು ಮಾತ್ರ ಅಂದಿಂದಿಂದಿಗೂ ಗೌಣ. **ಇದು ಸಂಪೂರ್ಣ ನಿಸ್ವಾರ್ಥ ವಾದ ಕೆಲಸ.** ಸಂಪೂರ್ಣ ಬೇರೆಯವರಿಗಾಗಿಯೇ ಮಾಡುವ, ಯಾವುದೇ ಪ್ರತಿಫಲವಿರದ ಕೆಲಸ.

ಅತಿ ಕ್ಲುಪ್ತತೆಯನ್ನು ಬಯಸುವ ಅಡಿಗೆಗಳು ಬೇರೆ ಯಾವುದೇ ಕುಶಲ ಕೆಲಸಗಳಷ್ಟೇ ಸೂಕ್ಷ್ಮವಾದವು. ಈ ಕ್ಲುಪ್ತ ಜ್ಞಾನ ಸಂಪೂರ್ಣ ನಮ್ಮ ಹೆಂಗಸರ ನೆನಪಿನಲ್ಲಿ ಮಾತ್ರ ಇರುವುದು. ಸೋನುಬಾಯಿಯವರೊಬ್ಬರಿಗೇ ನೂರಕ್ಕೂ ಹೆಚ್ಚು ಅಡಿಗೆಗಳ ಬಗ್ಗೆ ಗೊತ್ತು. ಮೇಲೆ ಹೇಳಿದ ರೀತಿಯಲ್ಲಿ ಒಂದೇ ಒಂದು ಚೂರು ವತ್ಯಾಸದಲ್ಲಿ ಅವರು ಹತ್ತಾರು ವಿಭಿನ್ನ ಪದಾರ್ಥಗಳನ್ನು ಮಾಡ ಬಲ್ಲರು. ಬರೀ ನೆನಪೊಂದಿದ್ದರೆ ಸಾಲದು. ಕೈಚಳಕ ತುಂಬಾ ಮುಖ್ಯ. ಹೀಗಾಗಿ ಹೆಂಗಸರ ಕೈಗಳೇ ಇಲ್ಲಿನ ಬಹು ಮುಖ್ಯ ಸಾಧನೆಗಳು.

ನಮ್ಮ ಹೆಂಗಸರ ಅಡಿಗೆಯ ರೀತಿಗಳು, ಸಂರಕ್ಷಿಸುವ ಕ್ರಮ, ಅಲ್ಲಿ ಉಪಯೋಗಕ್ಕೆ ಬರುವ ವಸ್ತುಗಳು, ಅಡ ಗಿರುವ ಸಾಮಾನ್ಯ ಪರಿಜ್ಞಾನಗಳಲ್ಲಿ ಅಪಾರ ವೈಜ್ಞಾನಿಕತೆ ಅಡಗಿದೆ. ಇವರ ಅಳತೆಯ ಕ್ರಮಗಳೇ ತಮ್ಮ ಮತ್ತು ಆಸುಪಾಸಿನ ಅಸ್ತಿತ್ವಗಳನ್ನು ಅವಲಂಬಿಸಿರುತ್ತವೆ. ಉದಾ : 'ಒಂದು ಬೊಗಸೆ ಕಾಯಿಗೆ ಒಂದು ಹಿಡಿ ಉಪ್ಪು' ಅನ್ನುವುದು ಲೆಕ್ಕ ಉಪ್ಪಿನ ಕಾಯಿಗೆ. ('ಮರಿಯಾ ಮೀಸ್' ಹೇಳುವಂತೆ ಹೆಂಗಸರ ಎಲ್ಲ ಕೆಲಸ ಗಳಿಗೂ, ಲೆಕ್ಕಾಚಾರ, ಜ್ಞಾನಗಳಿಗೂ ದೇಹವೇ ಸಾಧನ). ಇದನ್ನು ಭೇದಿಸುತ್ತಾ ಹೋದಂತೆ ನಾವು ದಂಗಾಗುತ್ತಾ ಹೋಗುತ್ತೇವೆ. ಪ್ರಕೃತಿ ತನ್ನ ತುಂಬ ಹೇಗೆ ವಿಸ್ಮಯ ಗಳನ್ನು ತುಂಬಿಟ್ಟುಕೊಂಡಿದೆಯೋ ಹಾಗೆಯೇ ಇದೂ. ಇಂತ ವಸ್ತು ಇಂಥದಕ್ಕೇ ಸಂರಕ್ಷಕ, ಇಂತದ್ದರ ಸೋಕು ಆಗಬಾರದು. ಅದರಲ್ಲಿ ಒಂದು ಚೂರು ಏರುಪೇರಾದರೂ ಕೆಲಸ ಹಾಳು ಎನ್ನುವ ಈ ಮಟ್ಟದ ಪರಿಜ್ಞಾನ ಬಂದ ದ್ದಾದರೂ ಎಲ್ಲಿಂದ ಎಂಬ ವಿಸ್ಮಯವಷ್ಟೇ ಉಳಿಯು ತ್ತದೆ. ಈ ಎಲ್ಲ ಪರಿಜ್ಞಾನಗಳನ್ನು ಆಧುನಿಕ ವಿಜ್ಞಾನದ

ಪರಿಭಾಷೆಯಲ್ಲಿ ಹೇಳಲು ನಮ್ಮ ಹೆಂಗಸರಿಗೆ ಸಾಧ್ಯವಾಗದೇ ಇರುವುದರಿಂದಲೇ ಅವರ ವಿಜ್ಞಾನ-ತಂತ್ರಜ್ಞಾನಗಳೆಲ್ಲಾ ಗೌಣವಾಗಿ ಹೋಗಿರುವುದು.

ನಾವು ಭೆಟ್ಟಿಯಾದ ಹೆಂಗಸರಲ್ಲಿ ಬಹುಪಾಲು ಮಂದಿಗೆ ಆಧುನಿಕ ಸಂರಕ್ಷಕಗಳ ಬಗ್ಗೆ ತಿಳಿದಿಲ್ಲ. ಅವುಗಳ ಬಗ್ಗೆ ತಿಳಿಸಿ ಹೇಳಿ ತಮಗೆ ಅವು ಸಿಕ್ಕರೆ ಉಪಯೋಗಿಸಲು ಇಚ್ಛಿಸುವಿರಾ ಎಂದು ಕೇಳಿದಾಗ ಸಾಮಾನ್ಯವಾಗಿ ಕೇಳಿ ಬಂದ ಒಂದೇ ಉತ್ತರ "ಇಲ್ಲ". 'ಒಣ ಹಾಕಲು ಜಾಗ ಇಲ್ಲವೇ ? ಬಿಸಿಲಿಲ್ಲವೇ ? ನಮ್ಮ ಸುತ್ತುಮುತ್ತಲಲ್ಲಿ ಬೇಕಾದ ವಸ್ತುಗಳಲ್ಲವೇ ? ನಮಗೇಕೆ ಬೇಕು ಸಂರಕ್ಷಕಗಳು" ಎನ್ನುತ್ತಾರೆ. ಖಡಾಖಂಡಿತವಾಗಿ "ರಕ್ಷಿಸುವ ಔಷಧಗಳು" ಬೇಡ ಅನ್ನುತ್ತಾರೆ.

ಇವನ್ನೆಲ್ಲಾ ಗಮನಿಸಿದಾಗ ನಮ್ಮ ಬದುಕಿನ ಅಖಂಡತೆಗೆ, ಮಹಿಳೆಯರ ಕೊಡುಗೆ ಅತಿ ಮುಖ್ಯವಾದುದು ಎಂಬುದು ತುಂಬಾ ಸ್ಪಷ್ಟ. ಈ ಅಖಂಡತೆಯನ್ನು ಅರ್ಥ ಮಾಡಿಕೊಳ್ಳುವ ಮನಸ್ಸಿರದ ಇಂದಿನ 'ಅಭಿವೃದ್ಧಿ' ಮಾದರಿಯು ನಮ್ಮ ಜೀವನ ಕ್ರಮಗಳನ್ನು 'ಜೀವಪ್ರಿಯ' ರೀತಿಯಿಂದ 'ಜೀವ ವಿನಾಶ' ರೀತಿಯೆಡೆಗೆ ಎಳೆದೊಯ್ಯುತ್ತಿದೆ,

ಇತ್ತೀಚೆಗೆ, ಮುಖ್ಯವಾಗಿ ನಗರ, ಪಟ್ಟಣಗಳ ಮಧ್ಯಮ ವರ್ಗಗಳಲ್ಲಿ ಎಲ್ಲ ಬಗೆಯ ಆಧುನಿಕ ಸಂರಕ್ಷಕಗಳ ಬಳಕೆ ಹೆಚ್ಚುತ್ತಿದೆ. ಮನೆಯಲ್ಲೂ ದುಡಿದು, ಹೊರಗೂ ದುಡಿಯುವ ಹೆಂಗಸರಂತೂ ಬಹುಪಾಲು ರೆಡಿಮೇಡ್ ಆಹಾರ ಪದಾರ್ಥಗಳಿಗೇ ಮೊರೆ ಹೋಗುತ್ತಾರೆ. ಮನೆ ಕೆಲಸದ ಹೊರೆಯನ್ನು ಸ್ವಲ್ಪ ಮಟ್ಟಿಗಾದರೂ ತಗ್ಗಿಸುವ ಸಿದ್ಧ ಆಹಾರ ಪದಾರ್ಥಗಳು ಇವರಿಗೊಂದು ವರಪ್ರಸಾದವಿದ್ದಂತೆ. ಆಧುನಿಕ ತಂತ್ರಜ್ಞಾನದ ರೀತಿಯೇ ಇಂಥದ್ದು. ಅದು ತುಂಬಾ 'ಮೊದಲು ಪ್ರವೇಶಿಸುವುದೇ 'ಮನೆ' ಗಳನ್ನು. ಮಹಿಳೆಯರಲ್ಲಿ ಆಕರ್ಷಣೆಗೆ ಹುಟ್ಟಿಸಿ, ಮನವೊಲಿಸುವ ಕೆಲಸ ಮಾಡುತ್ತಲೇ ಅವರನ್ನು ನಿಶ್ಯಕ್ತೀಕರಣ (disempower)ಗೊಳಿಸುತ್ತಿರುತ್ತದೆ.ನಾವಿಂದು ತುಂಬಾ ಮುಖ್ಯವಾಗಿ ಅರ್ಥಮಾಡಿಕೊಳ್ಳಬೇಕಾಗಿರುವದೆಂದರೆ ಈ ನಿಶ್ಯಕ್ತೀಕರಣಗೊಳಿಸುವ ಸಂಚನ್ನು. ಹಾಗೆಂದ ಮಾತ್ರಕ್ಕೆ ವರಪ್ರಸಾದದಂತಿರುವ ಆಧುನಿಕ ಸಾಧನ-ಸಾಮಗ್ರಿಗಳನ್ನು ಬಿಟ್ಟುಕೊಡುವ ಮೂರ್ಖತನವನ್ನೂ ಮಹಿಳೆಯರು ಒಪ್ಪಲಾರರು. ಆದರೆ ಇಕೋಲಾಜಿಕಲ್ ಆದ ಬದುಕಿಗೆ ತಳಹದಿಯನ್ನು ಒದಗಿಸಿಕೊಟ್ಟ ತಮ್ಮ ಜ್ಞಾನ-ಪರಿಜ್ಞಾನ, ಜೀವನ ಕ್ರಮಗಳನ್ನು ಹೃದಯಹೀನ ವಿಚ್ಛಿದ್ರಕಾರಕ ಶಕ್ತಿಗಳಿಗೆ ಬಲಿಕೊಡುವುದಂತೂ ಸಲ್ಲ. ಆದರೆ ಮಹಿಳೆಯೊಬ್ಬಳ ಮೇಲೆಯೇ ಇದರ ಸಂಪೂರ್ಣ ಜವಾಬ್ದಾರಿಯನ್ನು ಹೊರೆಸಿ "ಉಳಿಸಿಕೊಳ್ಳುವದಿದ್ದರೆ ಉಳಿಸಿಕೊಳ್ಳಿ"ಎನ್ನುವ ಧೋರಣೆಯಿಂದ ಮಾತ್ರ ಇದು ಸಾಧ್ಯವಾಗಲಾರದು. ಪ್ರತಿಯೊಬ್ಬರೂ ಇದರಲ್ಲಿ ಭಾಗಿಗಳಾಗಬೇಕಾದ ತುರ್ತಿನ ಅವಶ್ಯಕತೆ ಇಂದಿನದ್ದಾಗಿದೆ.

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ, ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ.

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ.

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ.

PRINTED MATTER




C. G. MANJULA
9. 3rd CROSS
MARKHAM ROAD
ASHOK NAGAR
BANGALORE - 560025.


ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು-560 067